

# ಪಂಡಿತನ ನೆರಳು

ಮತ್ತು ಇತರ ಕತೆಗಳು

ಸಂಪಾದಕರು

**ಜಿ. ಪಿ. ರಾಜರತ್ನಂ**

**ಸತ್ಯಶೋಧನ ಪ್ರಕಟನ ಮಂದಿರ**

**ಕೋಟೆ, ಬೆಂಗಳೂರು**

# ಪಂಡಿತನ ನೆರಳು

(ಪ್ರಪಂಚದ ಅತ್ಯುತ್ತಮವಾದ ನಾಲ್ಕು ಕತೆಗಳು)

ಸಂಪಾದಕರು

ಜಿ. ಪಿ. ರಾಜರತ್ನಂ

ಸತ್ಯಶೋಧನ ಪ್ರಕಟನ ಮಂದಿರ

೧೯೪೬ ] ಕೋಟೆ, ಬೆಂಗಳೂರು [ ೧ ರೂ

---

## ಜಿ. ಪಿ. ರಾಜರತ್ನಂ ಅವರ

| ಶಿಶುಸಾಹಿತ್ಯ | ಬಾಲಸಾಹಿತ್ಯ |
|---|---|
| ತುತ್ತೂರಿ | ಗೌತಮ ಬುದ್ಧ |
| ಕಡಲೆಪುರಿ | ಶ್ರೀ ರಾಮಚಂದ್ರ |
| ಚುಟುಕ | ಅಶೋಕ ಮೌರ್ಯ |
| ಗುಲಗಂಜಿ | ಶ್ರೀ ಹರ್ಷ |
| ಕೆನೆಹಾಲು | ಯೇಸುಕ್ರಿಸ್ತ |
| ಕಲ್ಲುಸಕ್ಕರೆ | ನರಿಯ ಬಾಲ |
| ಕೋಳಿಕಳ್ಳ | ದಾನವೀರ ವಿಶ್ವಂತರ |
| ಮೆರವಣಿಗೆ | ಪಂಚಾಯುಧ |
| ತಾರೆ | ಮಣಿಕಂಠ |
| ಕಣ್ಣಿಗೆ ಹಬ್ಬ | ತೆನಾಲಿ ರಾಮ |
| ಮಕ್ಕಳ ಗಾಂಧಿ | ಮಕ್ಕಳ ಮಂಛೌಸನ್ |
| ಗಿಳಿಮರಿಗಳ ಗಾಂಧಿ | ಪುಟಾಣಿ ಪಂಚತಂತ್ರ |

ಐದರಿಂದ ಹದಿನೈದರ ವರೆಗಿನ ಮಕ್ಕಳಿಗೆ

ಶುಚಿಯಾದ ಸ್ವಚ್ಛವಾದ ಸ್ವಾರಸ್ಯವಾದ ಸಾಹಿತ್ಯ

---

ಸತ್ಯಶೋಧನ ಪುಸ್ತಕ ಭಂಡಾರ, ಕೋಟೆ, ಬೆಂಗಳೂರು

# ಅರಿಕೆ

ಈ ಪುಸ್ತಕದಲ್ಲಿ ನಾಲ್ಕು ಕತೆಗಳಿವೆ. ಮೊದಲನೆಯದು ಜಾರ್ಜಿಯಾ ದೇಶದ ಜನಪದ ಸಾಹಿತ್ಯದಿಂದ ಎತ್ತಿಕೊಂಡು ಬರೆದದ್ದು, ಉಳಿದ ಮೂರು ಹ್ಯಾನ್ಸ್ ಕ್ರಿಶ್ಚನ್ ಆ್ಯಂಡರ್ಸನ್ ಎಂಬವನ ಮೂರು ಕತೆಗಳ ಅನುವಾದ.

ಹ್ಯಾನ್ಸ್ ಕ್ರಿಶ್ಚನ್ ಆ್ಯಂಡರ್ಸನ್ (೧೮೦೫ – ೧೮೭೫) ಡೆನ್ಮಾರ್ಕ್ ದೇಶದವನು. ಈತ ಬರೆದಿರುವ ಸಾಹಿತ್ಯದಲ್ಲೆಲ್ಲಾ ಈತನ 'ಫೆಯ್ರಿ ಟೇಲ್ಸ್' ಎಂಬ ಕಿನ್ನರ ಕತೆಗಳು ಲೋಕಪ್ರಸಿದ್ಧವಾದುವು. ಪಾಶ್ಚಾತ್ಯದೇಶಗಳಲ್ಲಿ, ತಮ್ಮ ತಮ್ಮ ಭಾಷೆಗಳಲ್ಲಿ, ಈತನ ಈ ಕಿನ್ನರ ಕಥೆಗಳನ್ನು ಮಕ್ಕಳಿಗೆ ಓದಿಸದೆ ಇರುವುದಿಲ್ಲ. ನಮ್ಮ ಪಂಚತಂತ್ರ, ಹಿತೋಪದೇಶಗಳ ಕಥೆಗಳ ಹಾಗೆ, ಈಸೋಪನ 'ಫೇಬಲ್ಸ್' ಎಂಬ ಪಶುಪಕ್ಷಿಗಳ ಕಥೆಗಳ ಹಾಗೆ, ಸಂಸ್ಕೃತ ಸಾಹಿತ್ಯದಲ್ಲಿ ಪ್ರಸಿದ್ಧವಾಗಿರುವ 'ಅನ್ಯಾಪದೇಶ' ಗಳ ಹಾಗೆ ಈತನ ಅನೇಕ ಕಿನ್ನರ ಕಥೆಗಳು ಮಕ್ಕಳಿಂದ ಹಿಡಿದು ಮುದುಕರವರೆಗೆ ಎಲ್ಲಾ ವಯಸ್ಸಿನವರಿಗೂ ಮನರಂಜನೆಯನ್ನು ಉಂಟುಮಾಡುವುದು ಮಾತ್ರ ವಲ್ಲದೆ ವ್ಯವಹಾರಕ್ಕೆ ಅಗತ್ಯವಾದ ಲೋಕನೀತಿಯನ್ನೂ ಕಾವ್ಯಚ್ಛಲದಿಂದ ಉಪದೇಶಮಾಡುತ್ತವೆ

ಇಂಗ್ಲಿಷಿನಲ್ಲಿ ನಾವು ಕೇಳಿರುವ 'ಪಿಲ್‌ಗ್ರಿಮ್ಸ್ ಪ್ರಾಗ್ರೆಸ್'' ಸಂಸ್ಕೃತ ದಲ್ಲಿ ನಾವು ಕೇಳಿರುವ 'ಪ್ರಬೋಧ ಚಂದ್ರೋದಯ' ಮತ್ತು 'ಸಂಕಲ್ಪ ಸೂರ್ಯೋದಯ' ಮುಂತಾದ ಜಾತಿಯ ಕೃತಿಗಳು ಕಾವ್ಯ ನಾಟಕಗಳ ರೂಪ ದಲ್ಲಿ ಅಧ್ಯಾತ್ಮ ವಿಚಾರಗಳನ್ನು ಪ್ರತಿಪಾದಿಸುವಂತೆಯೇ ಹ್ಯಾನ್ಸ್ ಕ್ರಿಶ್ಚನ್ ಆ್ಯಂಡರ್ಸನ್ನನ ಕೆಲವು ಕತೆಗಳಲ್ಲಿ ಕೂಡ ಅಧ್ಯಾತ್ಮವಾದವೇ ತಿರುಳಾಗಿದೆ.

ಇಂತಹ ಸಾಹಿತ್ಯದ ಪ್ರಕಾರಗಳನ್ನು 'ಪ್ಯಾರಬಲ್' (ಉಪಮಾನ ಕಥೆ, ದೃಷ್ಟಾಂತ), 'ಅಲಿಗರಿ' (ರೂಪಕಕಥೆ) ಎಂದು ಇಂಗ್ಲಿಷಿನಲ್ಲಿ ಕರೆಯುತ್ತಾರೆ.

ಈ ಸಂಗ್ರಹದಲ್ಲಿ ಇರುವ ನಾಲ್ಕು ಕತೆಗಳೂ ಈ 'ಫೇಬಲ್', 'ಪ್ಯಾರಬಲ್', 'ಅಲಿಗರಿ' ಎಂಬ ಜಾತಿಗೆ ಸೇರಿದುವು.

ಚಿಕ್ಕ ಮಕ್ಕಳು ಈ ಕತೆಗಳನ್ನು ಓದಿದರೆ ಮನಸ್ಸಿಗೆ ರಂಜನೆಯಾಗುತ್ತದೆ. ಇದನ್ನೇ ದೊಡ್ಡವರು ಓದಿದರೆ, ಇಲ್ಲಿನ ಘಟನೆಗಳನ್ನು ತಮ್ಮ ಸುತ್ತಮುತ್ತಿನ ಜನರ ನಡೆನುಡಿಗಳಿಗೆ ಅನ್ವಯಿಸಿಕೊಂಡು, ಅದರಿಂದ ಲೋಕನೀತಿಯನ್ನು ಸಂಗ್ರಹಿಸಬಹುದು, ಬದುಕಿನಲ್ಲಿ ಇಂದ್ರಿಯಗಳಿಗೆ ಗೋಚರವಾದುದು ಅಷ್ಟೇ ಅಲ್ಲದೆ ಅತೀಂದ್ರಿಯವಾದುದೂ ಒಂದು ಉಂಟೆಂಬ ನಂಬಿಕೆ ಸರ್ವದೇಶಕ್ಕೂ ಸಾಮಾನ್ಯವೆಂಬುದನ್ನೂ ಕಾಣಬಹುದು, ಪರದೇಶದ ಉತ್ಕೃಷ್ಟಕವಿಯ ಮನೋಧರ್ಮ ಸ್ವದೇಶದ ಉತ್ಕೃಷ್ಟಕವಿಯ ಮನಸ್ಸಿನಂತೆಯೇ ವಿಶ್ವಸ್ಪರ್ಶಿ ಎಂಬುದನ್ನೂ ಕಾಣಬಹುದು.

ಇಷ್ಟು ಅರಿಕೆಮಾಡಿ, ಕತೆಗಳನ್ನು ಸಹೃದಯರ ಮಡಿಲಿನಲ್ಲಿ ಇಡುತ್ತೇನೆ. ಅದಕ್ಕೆ ಮೊದಲು, ಈ ಕತೆಗಳಿಗೆ ಚಿತ್ರಗಳನ್ನು ಬರೆದುಕೊಟ್ಟ ಶ್ರೀ ಎಚ್. ಆರ್. ಸ್ವಾಮಿ ಇವರಿಗೆ ನನ್ನ ಕೃತಜ್ಞತೆಯನ್ನು ಸಂತೋಷದಿಂದ ಅರ್ಪಿಸುತ್ತೇನೆ.

ಜಿ. ಪಿ. ರಾಜರತ್ನಂ

# ಒಳಪಿಡಿ



# ಚಿತ್ರಗಳು

## ಜಿ. ಪಿ. ರಾಜರತ್ನಂ ಅವರ ಪುಸ್ತಕಗಳು

ರತ್ನನ ಪದಗಳು

ಶಾಂತಿ

ನೂರು ಪುಟಾಣಿ

ಪುರುಷ ಸರಸ್ವತಿ

ಪರಗತಿ ಪಕ್ಷಿ

ಹನಿಗಳು

ಬೆಳುದಿಂಗಳು

ಗಂಡುಗೊಡಲಿ

ಶಕಾರನ ಶಾರೋಟು

ಸಂಭವಾಮಿ ಯುಗೇಯುಗೇ

ಹತ್ತು ವರ್ಷ

ನಕ್ಕಳಾ ತಾಯಿ

ನಮ್ಮ ನಗೆಗಾರರು

ಕೈಲಾಸ ಕಥನ

ಏಕಲವ್ಯ

ಕೈಲಾಸಂ ಕಾಲಿಂಗ್

ಕೋಳೀಕೆ ರಂಗಾ

ನಮ್ಮನಮ್ಮವರು

ವಿದ್ಯಾರ್ಥಿವಿಚಾರ ವಿಲಾಸ

ವೆಂಕಣ್ಣಯ್ಯ ಜ್ಞಾಪಕ—
ಉಪನ್ಯಾಸಗಳು

ವೈಣಿಕನ ವೀಣೆ

---

ಸತ್ಯಶೋಧನ ಪುಸ್ತಕ ಭಂಡಾರ
ಕೋಟೆ, ಬೆಂಗಳೂರು

# ಅರಸನ ಕನಸು

ಇದು ಬರಿಯ ಕನಸಿನ ಕತೆ ಅಲ್ಲ. ಲೋಕದಲ್ಲಿ ನಾವು ಇಂತಹ ಸಂಗತಿ ನಡೆಯುವುದನ್ನು ಕಾಣುತ್ತೇವೆ.

ವ್ಯಕ್ತಿಯಾದವನು ಸದಾಚಾರಿಯಾಗಿದ್ದರೆ ಅದು ಅವನ ಸುತ್ತುಮುತ್ತು ಇರುವವರು ಆಚರಿಸುತ್ತಿರುವ ಸದಾಚಾರದ ಫಲ; ಅವನು ದುರಾಚಾರಿಯಾದರೆ ಅದು ಅವನ ಸುತ್ತುಮುತ್ತು ಇರುವವರ ದುರಾಚಾರದ ಪ್ರಭಾವ ಹತ್ತು ಜನರ ನಡುವೆ ಬದುಕುವವನು ಸಾಮಾನ್ಯವಾಗಿ ಅವರಂತೆಯೇ ಆಗಿಬಿಡುವುದು ಸಹಜ, ಈ ಕತೆಯು ಹಳ್ಳಿಯವನು ಇಂತಹ ವ್ಯಕ್ತಿ.

ಈ ಲೋಕಸತ್ಯವನ್ನು ತಿಳಿದಂಥವರು ಯಾವ ವ್ಯಕ್ತಿ ದುರಾಚಾರಮಾಡಿದರೂ ಅವನನ್ನು ದಂಡಿಸುವುದಿಲ್ಲ, ಯಾವ ವ್ಯಕ್ತಿ ಸದಾಚಾರ ನಡೆಸಿದರೂ ಅದಕ್ಕಾಗಿ ಪ್ರಶಂಸಿಸುವುದಿಲ್ಲ ಸಮಾಜದ ದೊಡ್ಡ ಹೊಣೆಯನ್ನು ತಿಳಿದು ಸಮಾಧಾನದಿಂದಿರುತ್ತಾರೆ. ಈ ಕತೆಯ ಘಟಸರ್ಪ ಈ ಸತ್ಯವನ್ನು ತಿಳಿದು ಸಮಾಧಾನವಾಗಿದ್ದ ಪ್ರಾಣಿ.

# ಅರಸನ ಕನಸು

— ಮೊದಲನೆಯ ಕನಸು —

ಬಹುಕಾಲದ ಹಿಂದೆ ಒಂದಾನೊಂದು ಊರಿನಲ್ಲಿ ಒಬ್ಬ ದೊರೆ ರಾಜ್ಯ ವಾಳುತ್ತಿದ್ದನು ರಾಜ್ಯದಲ್ಲಿ ಅವನೂ ಸುಖವಾಗಿದ್ದ, ಅವನ ಪ್ರಜೆಗಳೂ ಸುಖವಾಗಿದ್ದರು

ಒಂದು ಸಲ ಆ ದೊರೆ ಒಂದು ಕನಸು ಕಂಡ ತಾನು ಮಲಗಿದ್ದ ಕೊಠಡಿಯು ತುಂಬ ನರಿಗಳು ಓಡಾಡುತ್ತಿದ್ದ ಹಾಗೆ ಅವನಿಗೆ ಕನಸಾಯಿತು. ಕನಸಿನಲ್ಲಿ ಕೇಳಿಬಂದ ನರಿಗಳ ಕೂಗಿನಿಂದ ನಿದ್ರೆ ಭಂಗವಾಗಿ, ಅವನಿಗೆ ಎಚ್ಚರವಾಯಿತು. ತಾನು ಕಂಡ ಕನಸಿಗೆ ಏನು ಅರ್ಥವೋ ಅವನಿಗೆ ತಿಳಿಯು ಲಿಲ್ಲ. ಬೆಳಗಾದ ಒಡನೆಯೆ ಪುರೋಹಿತರನ್ನೂ ಮಂತ್ರಿಗಳನ್ನೂ ಕರೆಸಿ, ತಾನು ಕಂಡ ಕನಸನ್ನು ಅವರಿಗೆ ತಿಳಿಸಿ, "ಇದಕ್ಕೇನು ಅರ್ಥ ?" ಎಂದು ಕೇಳಿದ ಪುರೋಹಿತರಿಗಾಗಲಿ ಮಂತ್ರಿಗಳಿಗಾಗಲಿ ರಾಜನ ಕನಸಿನ ಅರ್ಥ ಗೊತ್ತಾಗಲಿಲ್ಲ

ಆಗ ರಾಜನು ಡಂಗುರದವನನ್ನು ಕರೆಸಿ, "'ರಾಜನ ಕನಸಿಗೆ ಅರ್ಥ ನೇನೆಂದು ತಿಳಿಸಿದವರಿಗೆ ತುಂಬ ಬಹುಮಾನ ಕೊಡುತ್ತೇನೆ' ಎಂದು ಡಂಗುರ ಹಾಕಿಸಿರಿ" ಎಂದು ಆಜ್ಞೆ ಮಾಡಿದನು ಅದರಂತೆ ಮಂತ್ರಿಗಳು ದೇಶದಲ್ಲೆಲ್ಲ ರಾಜನ ಆಜ್ಞೆಯನ್ನು ಸಾರಿಸಿದರು ಒಂದು ವಾರದೊಳಗಾಗಿ ದೇಶದ ನಾನಾ ಭಾಗಗಳಿಂದ ಸಾವಿರಾರು ಜನ ರಾಜನ ಕನಸಿಗೆ ಅರ್ಥ ಹೇಳುವುದಕ್ಕಾಗಿ ಬಂದು ರಾಜಧಾನಿಯಲ್ಲಿ ಸೇರಿದರು

ಹೀಗೆ ಬಂದವರಲ್ಲಿ ಒಬ್ಬ ದೂರದ ಹಳ್ಳಿಯಿಂದ ಬಂದವನು, ಬಡವ ಅವನು ರಾಜಧಾನಿಗೆ ಬರುವಾಗ ಎರಡು ಗುಡ್ಡಗಳ ಮಧ್ಯದ ಒಂದು ಕಣಿವೆ ಯನ್ನು ದಾಟಿ ಬರಬೇಕಾಗಿತ್ತು ಅವನು ಅದನ್ನು ದಾಟಿ ಬರುವಾಗ ಅಲ್ಲಿ ಅವನ ದಾರಿಗೆ ಅಡ್ಡವಾಗಿ ಒಂದು ದೊಡ್ಡ ಹಾವು ಮಲಗಿತ್ತು ಆ ಘಟ ಸರ್ಪದ ಉಬ್ಬಿದ ಹೆಡೆಯನ್ನೂ ಅದು ಹೊರಗೆ ಚಾಚುತ್ತಿದ್ದ ಎರಡು ಕವಲಿನ

ನಾಲಗೆಯನ್ನೂ ಕಂಡು ಆ ಹಳ್ಳಿಯುವನಿಗೆ ತುಂಬ ಹೆದರಿಕೆಯಾಯಿತು. ಮುಂದೆ ಹೆಜ್ಜೆಯಿಡಲಾರದೆ, ಹಿಂದಿರುಗಿ ಓಡಿಹೋಗಲಾರದೆ, ಅವನು ಅಲ್ಲಿಯೇ ನಡುಗುತ್ತ ನಿಂತುಬಿಟ್ಟ.

ಹಾವು ಅವನ ಹೆದರಿಕೆಯನ್ನು ಕಂಡು, "ಅಯ್ಯಾ ಹಳ್ಳಿಯುವನೆ! ಹೆದರಬೇಡ. ನಾನು ನಿನಗೆ ತೊಂದರೆ ಮಾಡುವುದಿಲ್ಲ. ನೀನು ಎಲ್ಲಿಗೆ ಹೋಗುವೆ ಎಂಬುದು ನನಗೆ ಗೊತ್ತು. ನೀನು ಏತಕ್ಕೆ ಹೋಗುವೆ ಎಂಬುದು ನನಗೆ ಗೊತ್ತು. ರಾಜಧಾನಿಯಲ್ಲಿ ರಾಜನು ಕಂಡ ಕನಸಿಗೆ ಏನು ಅರ್ಥ ಎಂಬುದನ್ನು ನಾನು ನಿನಗೆ ಹೇಳಿಕೊಡುತ್ತೇನೆ. ನೀನು ಅದನ್ನು ರಾಜನಿಗೆ ತಿಳಿಸು. ಆದರೆ ಮಾತ್ರ, ರಾಜನು ಪ್ರೀತಿಯಿಂದ ನಿನಗೆ ಏನು ಬಹುಮಾನ ಕೊಡುವನೋ ಅದರಲ್ಲಿ ಅರ್ಧವನ್ನು ನೀನು ನನಗೆ ಕೊಡಬೇಕು. ಇದಕ್ಕೆ ನೀನು ಒಪ್ಪುವೆಯು?" ಎಂದು ಮನುಷ್ಯರು ಮಾತನಾಡುವ ಹಾಗೆ ಹೇಳಿತು.

ಹೀಗೆ ಆ ಹಾವು ನಯವಾಗಿ ವಿನಯದಿಂದ ಮನುಷ್ಯರ ಹಾಗೆ ಮಾತನಾಡಿದುದನ್ನು ಕೇಳಿ ಹಳ್ಳಿಯುವನಿಗೆ ಸ್ವಲ್ಪ ಧೈರ್ಯ ಬಂತು, ಕೈಕಾಲುಗಳ ನಡುಕ ಕಡಿಮೆಯಾಯಿತು. ನಿಂತ ಕಡೆಯೇ ನೆಲದ ಮೇಲೆ ಮಂಡಿಯೂರಿ ಕುಳಿತು, ಎರಡು ಕೈಗಳನ್ನೂ ಜೋಡಿಸಿ ತಲೆಯ ಮೇಲಿಟ್ಟುಕೊಂಡು, ಆ ಹಳ್ಳಿಯವನು "ಓ! ಸರ್ಪರಾಜ! ನಿನ್ನ ಕೃಪೆಯಿಂದ ನಾನು ಈಗ ಬದುಕಿದೆ. ನಿನ್ನ ಕೃಪೆಯಿಂದ ನಾನು ನಾಳೆ ಅರಸನ ಬಹುಮಾನವನ್ನು ಸಂಪಾದಿಸುತ್ತೇನೆ. ಆ ಬಹುಮಾನದಲ್ಲಿ ನಿನಗೆ ಅರ್ಧ ಸತ್ಯವಾಗಿಯೂ ಕೊಡುತ್ತೇನೆ. ರಾಜನ ಕನಸಿಗೆ ಏನು ಅರ್ಥ ಎಂಬುದನ್ನು ನನಗೆ ದಯಮಾಡಿ ತಿಳಿಸು" ಎಂದು ಪ್ರಾರ್ಥಿಸಿದನು.

ಅದಕ್ಕೆ ಆ ಹಾವು "ಒಳ್ಳೆಯದು. ರಾಜನನ್ನು ನೀನು ಕಂಡಾಗ ಅವನಿಗೆ ಹೀಗೆ ಹೇಳು. 'ಓ ರಾಜಾ! ನೀನು ಕನಸಿನಲ್ಲಿ ನರಿಗಳನ್ನು ಕಂಡೆ. ನರಿ ಬಹಳ ಕುಯುಕ್ತಿಯ ಪ್ರಾಣಿ, ಬಹಳ ಮೋಸದ ಪ್ರಾಣಿ, ನಂಬಿದವರಿಗೆ ದ್ರೋಹಮಾಡುವ ಪ್ರಾಣಿ. ಆದ್ದರಿಂದ ನರಿಯು ಹಾಗೆಯೇ ಕುಯುಕ್ತಿಯನ್ನು ಉಪಯೋಗಿಸಿ, ಕಂಡವರಿಗೆ ಮೋಸಮಾಡಿ, ನಂಬಿದವರಿಗೆ ದ್ರೋಹಮಾಡ

ತಕ್ಕಂಥ ಜನರು ದೇಶದಲ್ಲಿ ಹೆಚ್ಚುತ್ತಿದ್ದಾರೆ ಎಂಬುದು ನಿನ್ನ ಕನಸಿನ ಅರ್ಥ' ಎಂದು ರಾಜನಿಗೆ ನೀನು ಹೇಳು. ಆದರೆ ಮಾತ್ರ ಮರೆಯಬೇಡ ರಾಜನು ಕೊಡುವ ಬಹುಮಾನದಲ್ಲಿ ನನಗೆ ಅರ್ಧ ತಂದುಕೊಡಬೇಕು ಮರೆಯಬೇಡ' ಎಂದು ಹೇಳಿತು.

ಹಾಗೆಯೇ ಆಗಲೆಂದು ಆ ಹಳ್ಳಿಯವನು ಆ ಹಾವಿಗೆ ನಡುಬಗ್ಗಿ ನಮಸ್ಕಾರಮಾಡಿದನು. ಹಾವು ಒಂದು ಪಕ್ಕಕ್ಕೆ ಸರಿದು ಅವನಿಗೆ ದಾರಿಬಿಟ್ಟಿತು. ಹಳ್ಳಿಯವನು ರಾಜಧಾನಿಗೆ ಹೊರಟುಬಂದನು.

ಆ ವೇಳೆಗೆ ರಾಜಧಾನಿಗೆ ಬಂದು ತುಂಬಿದ್ದ ಅನೇಕರು ರಾಜನ ಕನಸಿಗೆ ವಿಧವಿಧವಾಗಿ ಚಿತ್ರವಿಚಿತ್ರವಾಗಿ ಅರ್ಥ ಹೇಳುತ್ತಿದ್ದರು. ಆದರೆ ಅದು ಯಾವುದರಿಂದಲೂ ದೊರೆಯ ಮನಸ್ಸಿಗೆ ಸಮಾಧಾನವಾಗಲಿಲ್ಲ. ಆ ವೇಳೆಗೆ ಹಾವಿನಿಂದ ಗುಟ್ಟನ್ನು ತಿಳಿದುಕೊಂಡಿದ್ದ ನಮ್ಮ ಹಳ್ಳಿಯವನು ಬಂದು, ಅರಸನಿಗೆ ಅಡ್ಡಬಿದ್ದು, ತನಗೆ ಹಾವು ಹೇಳಿಕೊಟ್ಟ ಹಾಗೆಯೇ ಅರಸನಿಗೆ ಹೇಳಿದನು. ಅರಸನು ಅವನ ಮಾತಿಗೆ ಬಹಳ ಸಂತೋಷಪಟ್ಟು, ಅವನಿಗೆ ತುಂಬ ಬಹುಮಾನಮಾಡಿ ಕಳುಹಿಸಿದನು

ಆದರೆ ಆ ಹಳ್ಳಿಯವನು ಮಾತ್ರ ತಾನು ಹಾವಿಗೆ ಕೊಟ್ಟ ಮಾತನ್ನು ಉಳಿಸಿಕೊಳ್ಳಲಿಲ್ಲ ಬಂದ ದಾರಿಯಲ್ಲಿಯೇ ಹಿಂದಿರುಗಿದರೆ ಹಾವಿಗೆ ಅರ್ಧ ಬಹುಮಾನ ಕೊಡಬೇಕಾಗುವುದೆಂದು, ಆ ದಾರಿ ಬಿಟ್ಟು, ಬೇರೆ ದಾರಿಯಿಂದ ಬಳಸಿಕೊಂಡು ಹೋಗಿ ತನ್ನ ಹಳ್ಳಿಯನ್ನು ಸೇರಿದನು.

— ಎರಡನೆಯ ಕನಸು —

ಸ್ವಲ್ಪ ದಿವಸ ಕಳೆಯಿತು. ಹಳ್ಳಿಯವನು ಹಾವನ್ನು ಮರೆತೇಬಿಟ್ಟ.

ಇನ್ನೂ ಸ್ವಲ್ಪ ದಿವಸ ಕಳೆಯಿತು. ಅರಸನಿಗೆ ಇನ್ನೊಂದು ಕನಸು ಬಿತ್ತು. ತಾನು ಮಲಗಿದ್ದ ಮನೆಯ ತುಂಬ, ಯಾವ ಕಡೆ ನೋಡಿದರೂ ಹರಿತವಾದ ಕತ್ತಿಗಳು ಫಳಫಳನೆ ಬೀಸುತ್ತಿರುವ ಹಾಗೆ ಅವನ ಕನಸಿನಲ್ಲಿ ಕಾಣಿಸಿತು ಈ ಎರಡನೆಯ ಕತ್ತಿಗಳ ಕನಸನ್ನು ಕಂಡು ಅರಸನಿಗೆ ಕೂಡ

ದಿಗಿಲಾಯಿತು, ಹಣೆಯ ಮೇಲೆ ಬೆವರು ಒಡೆಯಿತು. ಆಗ ಅವನು ತನ್ನ ಮೊದಲಿನ ಕನಸಿಗೆ ಅರ್ಥಹೇಳಿದ ಆ ಹಳ್ಳಿಯವನನ್ನು ಬೇಗನೆ ಕರೆದು ತರುವಂತೆ ಮಂತ್ರಿಗೆ ಆಜ್ಞೆಮಾಡಿದ. ಅದರಂತೆ ಮಂತ್ರಿ ಆ ಹಳ್ಳಿಯವನನ್ನು ಕರೆದುತರುವಂತೆ ಆಳುಗಳನ್ನು ಕಳುಹಿಸಿದ.

ರಾಜನ ಆಳುಗಳು ಬಂದು ಕರೆದಾಗ ಆ ಹಳ್ಳಿಯವನಿಗೆ ತಾನು ಮೋಸ ಮಾಡಿದ ಹಾವಿನ ಜ್ಞಾಪಕ ಬಂತು ಆದರೆ, ತನಗೆ ಉಪಕಾರ ಮಾಡಿದ ಹಾವಿಗೆ ತಾನು ಮೋಸ ಮಾಡಿದೆನಲ್ಲಾ ಎಂದು ಅವನಿಗೆ ಸ್ವಲ್ಪವೂ ನಾಚಿಕೆಯಾಗಲಿಲ್ಲ. ಪುನಃ ಅದೇ ಹಾವಿನ ಸಹಾಯ ಪಡೆಯಬೇಕೆಂದು, "ಇದೋ ಬರದೆ, ನೀವು ಹೋಗಿ" ಎಂದು ರಾಜನ ದೂತರನ್ನು ಬೇರೆ ದಾರಿಯಿಂದ ಕಳುಹಿಸಿ, ತಾನು ಹಿಂದೆ ಹಾವನ್ನು ಕಂಡ ಕಣಿವೆಗೆ ಪುನಃ ಬಂದನು.

ಆದರೆ ಅಲ್ಲ ಎಲ್ಲಿ ನೋಡಿದರೂ ಹಾವು ಕಂಡುಬರಲಿಲ್ಲ. ಆಗ ಹಳ್ಳಿಯವನು "ಹಾವೇ! ಹಾವೇ! ಓ, ಸರ್ಪರಾಜಾ! ಸರ್ಪರಾಜಾ!" ಎಂದು ಗಟ್ಟಿಯಾಗಿ ಕೂಗಿದ. ಎಷ್ಟು ಕೂಗಿದರೂ ಹಾವು ಎಲ್ಲಿಯೂ ಕಾಣಿಸಲಿಲ್ಲ. ಮುಂದೆ ಏನು ಮಾಡಬೇಕೆಂದು ತಿಳಿಯದೆ ಆ ಹಳ್ಳಿಯವನು ಅಳುತ್ತ ಅಲ್ಲಿಯೇ ಕುಳಿತುಬಿಟ್ಟ.

ಆಗ ಹಾವು ಪಕ್ಕದ ಒಂದು ಹುತ್ತದಿಂದ ಹೊರಗೆ ಬಂದು, "ಏನಯ್ಯ? ಏಕೆ ಅಳುತ್ತೀಯೆ?" ಎಂದಿತು ಹಳ್ಳಿಯವನು ಬೆಚ್ಚಿಬಿದ್ದು, ಮೇಲೆದ್ದು, ಹಾವಿಗೆ ನಮಸ್ಕಾರಮಾಡಿ, "ಓ, ಮಹಾನಾಗಾ! ಹೋದ ಸಲ ನಾನು ಆಡಿದ ಮಾತು ತಪ್ಪಿದೆ. ನಾನು ಮಾಡಿದುದು ಮಹಾ ಅಪರಾಧವಾಯಿತು. ದಯಮಾಡಿ ನನ್ನನ್ನು ಕ್ಷಮಿಸು. ಅದೇ ಅರಸನಿಗೆ ಈಗ ಇನ್ನೊಂದು ಕನಸು ಕಾಣಿಸಿತಂತೆ. ಹರಿತವಾದ ಕತ್ತಿಗಳು ಸುತ್ತಲೂ ಬೀಸಾಡುವುದನ್ನು ಅವನು ಕನಸಿನಲ್ಲಿ ಕಂಡನಂತೆ. ಅದರ ಅರ್ಥವನ್ನು ಈಗಲೂ ನಾನೇ ಹೇಳಬೇಕಂತೆ. ಹೇಳಿದರೆ ತುಂಬ ಬಹುಮಾನ ಕೊಡುವನಂತೆ. ಈ ಸಲ ಖಂಡಿತ ಆ ಬಹುಮಾನವನ್ನು ಪೂರ್ತಿಯಾಗಿ ನಿನಗೇ ಒಪ್ಪಿಸುತ್ತೇನೆ. ದಯಮಾಡಿ ಅರಸಿನ ಕನಸಿನ ಅರ್ಥವನ್ನು ನನಗೆ ನೀನು ತಿಳಿಸು" ಎಂದು ಕಣ್ಣೀರು ಸುರಿಸುತ್ತ, ಕೈಮುಗಿದು ಬೇಡಿಕೊಂಡನು.

ಆಗ ಹಾವು "ಕೇಳು ಹಳ್ಳಿಗಾ! ಯುದ್ಧಮಾಡುವಾಗ ಮಾತ್ರ ಕತ್ತಿಗಳನ್ನು ಒರೆಗಳಿಂದ ಕಳಚುತ್ತಾರೆ ಯುದ್ಧವಾದಾಗ ಮಾತ್ರ ಹರಿತವಾದ ಕತ್ತಿಗಳನ್ನು ಎಲ್ಲ ಕಡೆಯೂ ಬೀಸುತ್ತಾರೆ. ಆದ್ದರಿಂದ, ಅರಸನು ಕಂಡ ಕನಸಿಗೆ ಇಷ್ಟೆ ಅರ್ಥ : ಹರಿತವಾದ ಕತ್ತಿ ಬೀಸುವದನ್ನು ಕನಸಿನಲ್ಲಿ ಕಂಡದ್ದರಿಂದ, ದೇಶದಲ್ಲಿ ಯುದ್ಧ ನಡೆಯುತ್ತದೆ ಎಂಬುದನ್ನು ಅರಸನು ತಿಳಿಯಲಿ" ಎಂದು ಹೇಳಿ, "ಈ ಸಲ ನೀನು ನಿನ್ನ ಮಾತನ್ನು ಉಳಿಸಿಕೊಳ್ಳುವೆಯಷ್ಟೆ?" ಎಂದಿತು.

"ಉಂಟೆ? ಆಡಿದ ಮಾತಿಗೆ ಮತ್ತೆ ತಪ್ಪಿಯೇನೆ?" ಎಂದು ಹಳ್ಳಿಯವನು ಹಾವಿಗೆ ಉಪಚಾರಹೇಳಿ, ರಾಜಧಾನಿಯ ಕಡೆಗೆ ಬೇಗ ಬೇಗ ಕಾಲು ಹಾಕಿದನು.

ರಾಜಧಾನಿಯಲ್ಲಿ ಅರಸನಾದರೋ ಆ ಹಳ್ಳಿಯವನು ಬರುವುದನ್ನೇ ಎದುರುನೋಡುತ್ತ ಕುಳಿತಿದ್ದನು. ಹಳ್ಳಿಯವನು ಬಂದೊಡನೆ ಅವನನ್ನು ತಾನು ಕಂಡ ಕನಸಿನ ಅರ್ಥವೇನೆಂದು ಕೇಳಿದನು ಹಳ್ಳಿಯವನು ಹಾವಿನಿಂದ ತಾನು ಕಲಿತುದನ್ನು ಒಪ್ಪಿಸಿದನು. ರಾಜನು ಹಳ್ಳಿಯವನು ಹೇಳಿದ ಅರ್ಥಕ್ಕೆ ಬಹಳ ಸಂತೋಷಪಟ್ಟು, ಅವನಿಗೆ ತುಂಬ ಬಹುಮಾನ ಕೊಟ್ಟನು. ಹಳ್ಳಿಯವನನ್ನು ಕಳುಹಿಸಿಕೊಟ್ಟ ಬಳಿಕ ಯುದ್ಧಕ್ಕೆ ಬೇಕಾದ ಸಿದ್ಧತೆಗಳನ್ನು ಮಾಡತೊಡಗಿದನು.

ಹಳ್ಳಿಯವನು ರಾಜಧಾನಿಯಿಂದ ತನ್ನ ಹಳ್ಳಿಗೆ ಹೊರಡುವುದಕ್ಕೆ ಮುಂಚೆ, ಅಂಗಡಿಬೀದಿಗೆ ಹೋಗಿ, ಒಂದು ಉದ್ದವಾದ ಹರಿತವಾದ ಕತ್ತಿಯನ್ನು ಕೊಂಡುಕೊಂಡು, ಕಂಬಳಿಯಲ್ಲಿ ಮುಚ್ಚಿಕೊಂಡು, ತನಗೆ ಸಹಾಯ ಮಾಡಿದ ಹಾವು ಇದ್ದ ಕಣಿವೆಗೆ ಬಂದನು. ಅವನು ಬರುವವೇಳೆಗೆ ಹಾವು ಅಲ್ಲಿ ದಾರಿಯಲ್ಲಿ ಕಾದುಕೊಂಡಿತ್ತು. ಹಳ್ಳಿಯವನನ್ನು ಕಂಡೊಡನೆಯೆ "ಏನಯ್ಯಾ? ಎಲ್ಲಿ—ಅರಸನು ಕೊಟ್ಟ ಬಹುಮಾನ?" ಎಂದು ಕೇಳಿತು.

ಅದಕ್ಕೆ ಹಳ್ಳಿಗನು ತನ್ನ ಕಂಬಳಿಯಲ್ಲಿ ಮುಚ್ಚಿಕೊಂಡಿದ್ದ ಕತ್ತಿಯನ್ನು ಥಟಕ್ಕನೆ ಹೊರಗೆಳೆದು, "ಬಹುಮಾನ ಬೇಕೇ ನಿನಗೆ? ಬಹುಮಾನ?

ತೆಗೆದುಕೊ! ಇದೆ ಬಹುಮಾನ!" ಎಂದು ಹಾವಿನ ಮೇಲೆ ಹಾಯ್ದು ಕತ್ತಿಯಿಂದ ಛಳೀರೆಂದು ಹೊಡೆದನು. ಆದರೆ ಅವನು ಕತ್ತಿಯನ್ನು ಕಂಬಳಿಯಿಂದ ಎಳೆದು, ಮೇಲೆ ಎತ್ತಿ, ಬೀಸುವ ಹೊತ್ತಿಗಾಗಲೇ ಹಾವು ಪಕ್ಕದಲ್ಲಿದ್ದ ತನ್ನ ಹುತ್ತವನ್ನು ಹೊಕ್ಕು ಕಣ್ಮರೆಯಾಗುತ್ತಿತ್ತು. ಆದರೂ ಆ ಹಳ್ಳಿಗನ ಕತ್ತಿಯ ಏಟು ಅದರ ಬಾಲದ ಮೇಲೆ ಬಿದ್ದು, ಬಾಲದ ತುದಿ ಕತ್ತರಿಸಿ ಹೋಯಿತು.

"ಇನ್ನೊಂದು ಸಲ ಬಹುಮಾನ ಕೇಳಲಿ. ಮಾಡುತ್ತೇನೆ ಇದಕ್ಕೆ" ಎಂದು ಕೋಪದಿಂದ ಹಲ್ಲು ಕಡಿಯುತ್ತ ಹಳ್ಳಿಯವನು ತನ್ನ ಹಳ್ಳಿಗೆ ಹೋದನು.

— ಮೂರನೆಯ ಕನಸು —

ಇನ್ನೂ ಸ್ವಲ್ಪಕಾಲ ಕಳೆದ ಬಳಿಕ ರಾಜನಿಗೆ ಇನ್ನೂ ಒಂದು ಕನಸು ಕಾಣಿಸಿಕೊಂಡಿತು. ತಾನು ಮಲಗುವ ಮಂಚದ ಸುತ್ತ ಕುರಿಮರಿಗಳು ಕುಣಿಯುತ್ತ ಓಡಾಡುವಂತೆಯೂ ತನ್ನ ಮಂಚದ ಮೇಲೆ ಪಾರಿವಾಳಗಳು ಹಾರಾಡುವಂತೆಯೂ ಅವನಿಗೆ ಕನಸಾಯಿತು. ಅರಸನಿಗೆ ಹಿಂದೆ ಕಂಡ ಕನಸುಗಳಿಂದ ಭಯವಾದಂತೆ ಈಗ ಆಗದಿದ್ದರೂ ಈ ಹೊಸ ಕನಸಿನ ಅರ್ಥವೇನೆಂದು ತಿಳಿಯಲು ತುಂಬ ಕುತೂಹಲವಾಯಿತು. ಅದಕ್ಕೋಸ್ಕರ ಪುನಃ ಆ ಹಳ್ಳಿಯವನನ್ನೇ ಕರೆತರುವಂತೆ ಮಂತ್ರಿಗಳಿಗೆ ಅಜ್ಞೆಮಾಡಿದನು.

ಈಸಲ ಮಾತ್ರ, ಅರಸನ ಆಜ್ಞೆಯನ್ನು ಕೇಳಿದಾಗ ಹಳ್ಳಿಯವನಿಗೆ ತುಂಬ ಭಯವಾಯಿತು. ಕನಸಿನ ಅರ್ಥವನ್ನು ತಿಳಿಯದ ತಾನು ಅರಸನ ಮುಂದೆ ಹೇಗೆ ಹೋಗಿ ನಿಲ್ಲುವುದು ಎಂದು ಅವನಿಗೆ ಬಹಳ ಯೋಚನೆಯಾಯಿತು. ಹಿಂದೆ ಎರಡು ಸಲವಾದರೋ ಹಾವು ತನಗೆ ಅರಸನ ಕನಸಿಗೆ ಏನು ಅರ್ಥವೆಂಬುದನ್ನು ಹೇಳಿಕೊಟ್ಟು ಉಪಕಾರಮಾಡಿತ್ತು. ಆದರೆ ಆ ಉಪಕಾರಕ್ಕೆ ಪ್ರತಿಯಾಗಿ ತಾನು ಅದಕ್ಕೆ ಅಪಕಾರ ಮಾಡಿದುದು ಅವನಿಗೆ ಜ್ಞಾಪಕವಾಯಿತು. ಮೊದಲನೆಯ ಸಲ ಆಡಿದ ಮಾತಿನಂತೆ ಹಾವಿಗೆ ಅರ್ಧ ಬಹುಮಾನವನ್ನು ಕೊಡದೆ ಮೋಸಮಾಡಿದುದೂ ಎರಡನೆಯ ಸಲ ತಾನು

ಕೋಪದಿಂದ ಅದರ ಬಾಲವನ್ನು ಕತ್ತರಿಸಿದುದೂ ಅವನಿಗೆ ನೆನಪಾಯಿತು. ಹಾವಿನ ಎದುರಿಗೆ ಹೋಗಿ ನಿಲ್ಲಲು ನಾಚಿಕೆಯಾಯಿತು. ಹಾವನ್ನು ಪುನಃ ಮಾತನಾಡಿಸಲು ಧೈರ್ಯವಿಲ್ಲದೆ ಹೋಯಿತು. ತಾನು ಏನುಮಾಡಬೇಕೆಂದು ಹಳ್ಳಿಯವನಿಗೆ ದಿಕ್ಕೇ ತೋಚಲಿಲ್ಲ

ಆದರೆ ಅರಸನ ಆಜ್ಞೆಯನ್ನು ಅವನು ಮೀರುವ ಹಾಗಿರಲಿಲ್ಲ. ಹೋಗದೆ ನಿಂತರೆ ಅರಸನ ಶಿಕ್ಷೆಗೆ ತಾನು ಗುರಿಯಾಗಬೇಕು ಹೋಗುವುದಾದರೆ ಕನಸಿನ ಅರ್ಥ ತಿಳಿಯಬೇಕು ಕನಸಿನ ಅರ್ಥ ತಿಳಿಯಬೇಕಾದರೆ ಹಾವನ್ನು ಮಾತನಾಡಿಸಬೇಕು ಹಾವನ್ನು ಮಾತನಾಡಿಸಲು ಹೋದರೆ ಅದರ ಕೋಪಕ್ಕೆ ಗುರಿಯಾಗಬೇಕು ಅರಸನ ಆಗ್ರಹಕ್ಕೆ ಪಾತ್ರನಾಗಬೇಕೋ ಅಥವಾ ಹಾವಿನ ಕೋಪಕ್ಕೆ ತುತ್ತಾಗಬೇಕೋ ಎಂಬುದನ್ನು ಆ ಹಳ್ಳಿಯವನು ಬೇಗ ನಿಶ್ಚಯಿಸಲಾರದೆಹೋದನು

ಆದರೆ ಕಡೆಗೆ, ಸುಮ್ಮನೆ ಕುಳಿತು ಅರಸನ ಶಿಕ್ಷೆಗೆ ಗುರಿಯಾಗುವುದಕ್ಕಿಂತ ಪ್ರಯತ್ನಮಾಡಿ ನೋಡಿ ಹಾವಿನ ಕೋಪವನ್ನು ಎದುರಿಸುವುದೇ ಮೇಲೆಂದು ಅವನಿಗೆ ಎನ್ನಿಸಿತು. ಆಗ ಅವನು ತನಗೆ ತಾನೇ ಆವಷ್ಟು ಮಟ್ಟಿಗೆ ಧೈರ್ಯ ಹೇಳಿಕೊಂಡು, ಹಿಂದೆ ತಾನು ಹಾವನ್ನು ಕಂಡಿದ್ದ ಅದೇ ಕಣಿವೆಗೆ ಪುನಃ ಬಂದನು

ಹಾವು ಅಲ್ಲಿ ಕಂಡುಬರಲಿಲ್ಲ. ಹಳ್ಳಿಯವನು ಅದರ ಹುತ್ತದ ಹತ್ತಿರ ಬಾಯಿ ಇಟ್ಟು "ಓ, ನಾಗರಾಜಾ! ಕೃತಘ್ನನಾದ ನಾನು ಪುನಃ ನಿನ್ನ ಹತ್ತಿರ ಬಂದು ಭಿಕ್ಷೆ ಬೇಡುತ್ತಿದ್ದೇನೆ. ಮೊದಲನೆಯ ಸಲ ನಾನು ನಿನಗೆ ಅನ್ಯಾಯಮಾಡಿದೆ. ಎರಡನೆಯ ಸಲ ನಾನು ನಿನಗೆ ಅಪಕಾರಮಾಡಿದೆ. ನನ್ನ ಅಪರಾಧ ಅತಿ ದೊಡ್ಡದು ನೀನು ಕರುಣೆಯಿಂದ ನನ್ನನ್ನು ಉದ್ಧಾರ ಮಾಡಬೇಕು ಅರಸನಿಗೆ ಈಗ ಇನ್ನೂ ಒಂದು ಕನಸು ಕಾಣಿಸಿದೆಯಂತೆ. ಅದರ ಅರ್ಥವನ್ನು ಅವನಿಗೆ ತಿಳಿಸದಿದ್ದರೆ ಅರಸನ ಶಿಕ್ಷೆಗೆ ನಾನು ಗುರಿಯಾಗಬೇಕಾಗುತ್ತದೆ. ದಯಮಾಡಿ ನನ್ನನ್ನು ಉಳಿಸು" ಎಂದು ದೈನ್ಯದಿಂದ ಬೇಡಿಕೊಂಡನು.

ಆಗ ಹಾವು ಹುತ್ತದಿಂದ ಹೊರಗೆ ಬಂದು, ಅರಸನು ಕಂಡ ಮೂರನೆಯ ಕನಸು ಏನೆಂಬುದನ್ನು ಕೇಳಿದ ಬಳಿಕ, "ಕುರಿಗಳನ್ನೂ ಪಾರಿವಾಳಗಳನ್ನೂ ಕನಸಿನಲ್ಲಿ ಕಂಡದ್ದರಿಂದ ದೇಶದಲ್ಲಿ ಇನ್ನು ಮುಂದೆ ಯುದ್ಧವು ನಿಂತು, ಸುಭಿಕ್ಷವಾಗಿ, ಪ್ರಜೆಗಳೆಲ್ಲ ಸುಖಶಾಂತಿಗಳಿಂದ ಸಂತೋಷವಾಗಿರುವರೆಂದು ಅರಸನು ತಿಳಿಯಲಿ" ಎಂದು ಹೇಳಿ, "ಈ ಸಲ ಅರಸನು ನಿನಗೆ ಬಹುಮಾನ ಕೊಟ್ಟರೆ, ನೀನು ನನಗೆ ಏನು ಕೊಡುವೆ?" ಎಂದು ಕೇಳಿತು

ಹಳ್ಳಿಯುವನು ನಾಚಿಕೆಯಿಂದ ತಲೆ ತಗ್ಗಿಸಿ, "ಈ ಸಲ, ತಪ್ಪದೆ, ಸತ್ಯವಾಗಿ ನಿನಗೆ ಅರ್ಧ ಕೊಡುತ್ತೇನೆ" ಎಂದು ಮಾತುಕೊಟ್ಟು, ರಾಜಧಾನಿಗೆ ಹೋದನು.

ರಾಜನು ಹಿಂದಿನ ಹಾಗೆಯೇ ಹಳ್ಳಿಗನ ದಾರಿಯನ್ನೇ ಎದುರು ನೋಡುತ್ತ ಕಾಯುತ್ತಿದ್ದನು. ಹಳ್ಳಿಯುವನಾದರೂ ತಡಮಾಡದೆ, ಬಂದ ಕೂಡಲೆ ಹಾವು ತನಗೆ ಹೇಳಿಕೊಟ್ಟಿದ್ದ ಹಾಗೆಯೇ ಅರಸನಿಗೆ ಹೇಳಿದನು. ಅರಸನು ಅವನ ಮಾತುಗಳನ್ನು ಕೇಳಿ, ತುಂಬ ಸಂತೋಷಪಟ್ಟು, ಅವನಿಗೆ ಬಹಳವಾಗಿ ಬಹುಮಾನಗಳನ್ನು ಕೊಟ್ಟನು

ಅರಸನು ಕೊಟ್ಟ ಬಹುಮಾನಗಳೆನ್ನು ಹೊತ್ತುಕೊಂಡು ಆ ಹಳ್ಳಿಯುವನು ಹಾವಿನ ಕಣಿವೆಗೆ ಬಂದಾಗ ಹಾವು ಅವನಿಗಾಗಿ ಕಾಯ್ದುಕೊಂಡು ಮಲಗಿತ್ತು. ಹಳ್ಳಿಯುವನು ಈ ಸಲ ಮಾತ್ರ ತಾನು ಆಡಿದ ಮಾತಿಗೆ ತಪ್ಪದೆ, ತಾನು ತಂದಿದ್ದುದೆಲ್ಲವನ್ನೂ ಹಾವಿನ ಮುಂದೆ ಇಟ್ಟು, "ಓ, ನಾಗರಾಜಾ! ನಿನ್ನ ತಾಳ್ಮೆ ಬಹಳ ದೊಡ್ಡದು. ನಾನು ಮೊದಲನೆಯ ಸಲ ನಿನಗೆ ಮೋಸಮಾಡಿದರು ಕೂಡ, ಎರಡನೆಯ ಸಲ ನಾನು ನಿನ್ನ ಬಾಲವನ್ನು ಕಡಿದು ಹಾಕಿದರು ಕೂಡ, ನೀನು ನನಗೆ ಏನೂ ಹಾನಿಮಾಡದೆ, ಈಗ ಮೂರನೆಯ ಸಲವೂ ನನಗೆ ಸಹಾಯಮಾಡಿರುವೆ. ನಿನ್ನ ಉಪಕಾರಕ್ಕೆ ನಾನು ಏನು ಪ್ರತಿ ಉಪಕಾರಮಾಡಲಿ? ಇದೋ, ಅರಸನು ನನಗೆ ಕೊಟ್ಟಿರುವ ಬಹುಮಾನನೆಲ್ಲವನ್ನೂ ನಿನಗೆ ಸಮರ್ಪಿಸುತ್ತೇನೆ" ಎಂದು ಹಾವಿಗೆ ಕೈಮುಗಿದು, ಹೊರಡಲು ಎದ್ದನು.

ಆಗ ಹಾವು ಅವನ ಕಡೆ ಮೃದುವಾಗಿ ನೋಡಿ, " ಅಯ್ಯಾ, ನಾಚಬೇಡ. ದುಃಖಪಡಬೇಡಪ್ಪ ನೀನು ನನಗೆ ಮೋಸಮಾಡಿದುದು ನಿನ್ನ ತಪ್ಪಲ್ಲ. ನೀನು ನನಗೆ ಅಪಕಾರಮಾಡಿದುದು ನಿನ್ನ ತಪ್ಪಲ್ಲ. ನೀನು ಮೊದಲನೆಯ ಸಲ ಬಂದಾಗ ದೇಶದ ತುಂಬ ಮೋಸ, ಸುಳ್ಳು, ಅನ್ಯಾಯ ತುಂಬಿತ್ತು. ಆದ್ದರಿಂದಲೇ ನೀನು ಮೋಸಗಾರನಾಗಿ, ಸುಳ್ಳುಹೇಳಿ, ಬೇರೆ ದಾರಿಯಿಂದ ಬಳಸಿಕೊಂಡು ನಿನ್ನ ಹಳ್ಳಿಗೆ ನೀನು ಹೋದೆ. ಎರಡನೆಯ ಸಲ ನೀನು ಬಂದಾಗ ದೇಶದಲ್ಲಿ ಯುದ್ಧ ನಡೆಯುತ್ತಿತ್ತು, ಒಬ್ಬರು ಒಬ್ಬರನ್ನು ಕೋಪದಿಂದ ಕೊಲ್ಲುತ್ತಿದ್ದರು. ಆದ್ದರಿಂದಲೇ ನೀನು ನನ್ನ ಉಪಕಾರವನ್ನು ಕೂಡ ಮರೆತು, ನನ್ನನ್ನು ಕೊಲ್ಲಬೇಕೆಂದು ಕತ್ತಿಯಿಂದ ಹೊಡೆದೆ. ಆದರೆ ಈಗ ದೇಶದಲ್ಲಿ ಶಾಂತಿ ನೆಲೆಸಿದೆ, ಪ್ರಜೆಗಳೆಲ್ಲ ನೆಮ್ಮದಿಯಾಗಿದ್ದಾರೆ. ಯಾರಿಗೂ ಅನ್ಯಾಯಮಾಡುವ ಮನಸ್ಸು ಇಲ್ಲ. ಆದ್ದರಿಂದಲೇ ಈಗ ನೀನು ಅರಸನ ಬಹುಮಾನ ಅಷ್ಟನ್ನೂ ನನಗೆ ಕೊಟ್ಟು, ನನ್ನ ಕ್ಷಮೆಯನ್ನು ಬೇಡುತ್ತಿರುವೆ. ಆದರೆ, ಓ ಹಳ್ಳಿಗಾ, ನಿನ್ನ ಈ ಬಹುಮಾನ ನನಗೆ ಬೇಡ ನಾನು ಹಾವಾದರೂ, ನೀನು ಮನುಷ್ಯನಾದರೂ, ನಾವು ಇಬ್ಬರೂ ಒಂದೇ ದೇವರ ಮಕ್ಕಳು. ಹೋಗು. ಹೋಗಿ, ನಿನ್ನ ಹಳ್ಳಿಯಲ್ಲಿ ಸುಖವಾಗಿರು '' ಎಂದು ಹೇಳಿ, ತನ್ನ ಹುತ್ತದೊಳಕ್ಕೆ ಹೊರಟು ಹೋಯಿತು.

ಹಳ್ಳಿಯುವನು ಅರಸನ ಬಹುಮಾನವನ್ನು ತಾನು ಪುನಃ ತೆಗೆದುಕೊಂಡು, ತನ್ನ ಹಳ್ಳಿಗೆ ಹೋಗಿ ಸುಖವಾಗಿದ್ದನು.

# ಪಂಡಿತನ ನೆರಳು

ಉಷ್ಣದೇಶಗಳಲ್ಲಿ ಸೂರ್ಯನ ತಾಪ ಹೆಚ್ಚು. ಆದಕಾರಣ ಜನ ಸಾಮಾನ್ಯವಾಗಿ ಕಂದುಬಣ್ಣವಾಗಿರುತ್ತಾರೆ. ಅತಿ ಉಷ್ಣವಾದ ದೇಶಗಳಲ್ಲಿ ಅವರ ಚರ್ಮ ತುಂಬ ಕಪ್ಪಾಗಿರುತ್ತದೆ.

ಒಂದು ಸಲ ಒಬ್ಬ ಪಂಡಿತನು ಶೀತದೇಶದಲ್ಲಿದ್ದ ತನ್ನ ಮನೆಯನ್ನು ಬಿಟ್ಟು ಉಷ್ಣದೇಶಕ್ಕೆ ಬಂದ. ತಾನು ತನ್ನ ದೇಶದಲ್ಲಿ ಓಡಿಯಾಡುತ್ತಿದ್ದಂತೆಯೇ ಇಲ್ಲಿಯೂ ಮನಸ್ಸು ಬಂದ ಹಾಗೆ ತಿರುಗಾಡಬಹುದೆಂದು ಅವನು ಎಂದುಕೊಂಡಿದ್ದ. ಆದರೆ ಅವನು ಹಾಗೆ ಎಂದುಕೊಂಡದ್ದು ತಪ್ಪಾಗಿತ್ತು. ಆ ದೇಶದ ಇತರ ಬುದ್ಧಿವಂತರ ಹಾಗೆಯೇ ತಾನು ಕೂಡ ಹಗಲೆಲ್ಲ ಮನೆಯೊಳಗೇ ನಿಂತು, ಬಿಸಿಲಿನ ಝಳ ಒಳಗೆ ಬಾರದಹಾಗೆ ಮನೆಯ ಬಾಗಿಲು ಕಿಟಕಿಗಳನ್ನೆಲ್ಲ ಮುಚ್ಚಿಕೊಂಡಿರಬೇಕಾಯಿತು. ನೋಡಿದರೆ, ಮನೆಯಲ್ಲಿ ಯಾರೂ ಇಲ್ಲವೋ ಅಥವಾ ಮನೆಯವರೆಲ್ಲ ನಿದ್ರೆಮಾಡುತ್ತಿರುವರೋ ಎನ್ನುವಹಾಗೆ ಕಾಣುತ್ತಿತ್ತು. ಅವನು ವಾಸವಾಗಿದ್ದ ಬೀದಿ ಬಹಳ ಇಕ್ಕಟ್ಟಾಗಿತ್ತು. ಅಲ್ಲಿಯ ಮನೆಗಳೋ ಬಲು ಎತ್ತರ. ಬಿಸಿಲೋ ಬೆಳಗಿನಿಂದ ಸಂಜೆಯವರೆಗೂ ಒಂದೇಸಮನೆ ಕಾಯುತ್ತಿತ್ತು. ಹಾಗಾಗಿ ಅಲ್ಲಿ ವಾಸ ಮಾಡುವುದು ಬಹಳ ಕಠಿನವಾಗಿತ್ತು.

ಶೀತದೇಶದಿಂದ ಬಂದ ಆ ಪಂಡಿತ ಇನ್ನೂ ಚಿಕ್ಕವನು, ಚತುರ. ಆದರೆ ಆ ಬಿಸಿಲು ಎಂದರೆ ಉರಿಯುವ ಒಲೆಯೊಳಗೆ ಕುಳಿತಹಾಗಿತ್ತು. ಕೈಕಾಲುಗಳಲ್ಲಿ ತ್ರಾಣವೇ ಇಲ್ಲದ ಹಾಗೆ ನಿಶ್ಶಕ್ತಿಯಾಯಿತು. ಅವನ ದೇಹದ ಗಾತ್ರ ಸಣ್ಣದಾಗುತ್ತ ಬಂತು. ಅವನ ನೆರಳು ಕೂಡ ಸೊರಗಿ ಒಣಗಿಕೊಂಡು, ತನ್ನ ಊರಿನಲ್ಲಿದ್ದುದಕ್ಕಿಂತ ಸಣ್ಣದಾಯಿತು. ಇದ್ದ ಸಣ್ಣ ನೆರಳು ಕೂಡ ಸೂರ್ಯನೆದುರು ಮರೆಯಾಗಿ ಸಾಯಂಕಾಲ ಸೂರ್ಯಾಸ್ತಮಾನದವರೆಗೂ ಕಾಣಿಸಿಕೊಳ್ಳುತ್ತಿರಲಿಲ್ಲ. ಸಂಜೆಯಾದಮೇಲೆ, ಮನೆಯೊಳಗೆ ದೀಪಗಳನ್ನು ಹಚ್ಚಿದಾಗ, ನೆರಳು ಗೋಡೆಯಮೇಲೆ ಕೈಕಾಲು ಚಾಚಿಕೊಂಡು, ಮೇಲೆ ಸೂರಿನವರೆಗೂ ನಿಮಿರಿ ಬೆಳೆಯುವುದನ್ನು ನೋಡುವುದೇ ಕಣ್ಣಿಗೆ ಒಂದು ಹಬ್ಬವಾಗಿತ್ತು.

ಪಂಡಿತನು ಒಂದೊಂದು ಸಲ ಕಿಟಕಿಯ ಮುಂದಿನ ಮುಖಶಾಲೆಗೆ ಹೋಗಿ ಅಲ್ಲಿ ಕೈಕಾಲು ಚಾಚಿಕೊಳ್ಳುತ್ತಿದ್ದನು, ಆಗ, ತಿಳಿಯಾದ ಸುಂದರ ವಾದ ಆ ಆಕಾಶದಲ್ಲಿ ನಕ್ಷತ್ರಗಳು ಕಾಣಿಸಿಕೊಂಡಾಗ ಅವನಿಗೆ ಜೀವ ಬಂದ ಹಾಗೆ ಆಗುತ್ತಿತ್ತು.. ಆ ವೇಳೆಯಲ್ಲಿ ಜನ ತಮ್ಮ ತಮ್ಮ ಮನೆಗಳ ಕಿಟಕಿಯ ಮುಂದಿನ ಮುಖಶಾಲೆಗಳಲ್ಲಿ ಬಂದು ಕಾಣಿಸಿಕೊಳ್ಳುತ್ತಿದ್ದರು. ಉಷ್ಣದೇಶ ದಲ್ಲಿ ಪ್ರತಿಮನೆಯ ಕಿಟಕಿಯ ಮುಂದೆ ಒಂದು ಮುಖಶಾಲೆಯಿರುವುದು ಪದ್ಧತಿ ಆ ದೇಶದಲ್ಲಿಯೇ ಹುಟ್ಟಿ ಬೆಳೆದು ಅಲ್ಲಿಯ ಸೂರ್ಯನ ತಾಪ ಅಭ್ಯಾಸವಾದವರು ಕೂಡ ಸಂಜೆ ಮುಖಶಾಲೆಗೆ ಬಂದು, ಆಗಿನ ತಂಪಾದ ಗಾಳಿಗೆ ಮೈಯೊಡ್ಡುವುದು ಅಗತ್ಯ ಆಗ ಮಾತ್ರ ಬೀದಿಗಳಲ್ಲೆಲ್ಲ ಜೀವ ತುಂಬಿರುತ್ತದೆ ಇಲ್ಲಿ ಮೋಚಿಯವರು, ಅಲ್ಲಿ ದರ್ಜಿಯವರು, ಇನ್ನೂ ಹೀಗೆ ಬಗೆಬಗೆಯ ವೃತ್ತಿಯವರು ಬೀದಿಯಲ್ಲಿ ಕುರ್ಚಿಗಳನ್ನೂ ಮೇಜು ಗಳನ್ನೂ ತಂದು, ನೂರಾರು ದೀಪಗಳನ್ನು ಹಚ್ಚಿಟ್ಟು, ಮಾತನಾಡುತ್ತಾ ಹಾಡುತ್ತಾ ಆ ಜನ ಸಂತೋಷವಾಗಿರುತ್ತಾರೆ ಜನರು ನಡೆದಾಡುತ್ತಾರೆ, ಗಾಡಿಗಳು ಓಡಿಯಾಡುತ್ತವೆ, ಹೇಸರಗತ್ತೆಗಳು ಕತ್ತಿನ ಗೆಜ್ಜೆಗಳನ್ನು ಕಿಣಿ ಕಿಣಿ ಶಬ್ದ ಮಾಡುತ್ತ ಗಾಡಿ ಎಳೆಯುತ್ತವೆ, ಸತ್ತವರನ್ನು ಶ್ಮಶಾನಕ್ಕೆ ಎತ್ತಿ ಕೊಂಡೊಯ್ಯುವ ವಾದ್ಯ ಕೇಳಿಸುತ್ತದೆ. ಹೀಗೆ ಬೀದಿಯೆಲ್ಲ ಬಗೆಬಗೆಯ ಜೀವನದಿಂದ ಕಳಕಳಿಸುತ್ತಿರುತ್ತದೆ

ಆದರೆ ಈ ನಮ್ಮ ಶೀತದೇಶದ ಪಂಡಿತನು ವಾಸವಾಗಿದ್ದ ಮನೆಯ ಎದುರುಮನೆಯಲ್ಲಿ ಮಾತ್ರ ಜೀವದ ಚಿಹ್ನೆ ಏನೂ ಇರಲಿಲ್ಲ, ಎಲ್ಲ ಮೌನ ವಾಗಿತ್ತು. ಆದರೂ ಆ ಮನೆಯಲ್ಲಿ ಯಾರೋ ವಾಸವಾಗಿದ್ದರೆಂಬುದು ನಿಜ. ಏಕೆಂದರೆ, ಕಿಟಕಿಯ ಮುಂದಿನ ಮುಖಶಾಲೆಯಲ್ಲಿ ಹೂಗಳು ಚೆನ್ನಾಗಿ ಅರಳಿದ್ದುವು ನೀರು ಹುಯ್ಯುವವರು ಯಾರೂ ಇಲ್ಲದೆ ಆ ಬಿಸಿಲಿನಲ್ಲಿ ಹೂಗಳು ಹಾಗೆ ಬೆಳೆಯುವುದು ಸಾಧ್ಯವಿಲ್ಲ ಆದ್ದರಿಂದ ಗಿಡಗಳಿಗೆ ನೀರು ಎರೆಯಲು ಆ ಮನೆಯಲ್ಲಿ ಯಾರೋ ಇರಬೇಕು. ಮುಖಶಾಲೆಯ ಹಿಂದು ಗಡೆ ಇದ್ದ ಕಿಟಕಿಯ ಬಾಗಿಲು ಸಂಜೆಯ ಹೊತ್ತು ಅರ್ಧ ತೆರೆದಿರುತ್ತಿತ್ತು; ಮನೆಯ ಮುಂಭಾಗ ಕತ್ತಲೆಯಾಗಿದ್ದರೂ ಒಳಭಾಗದಿಂದ ಸಂಗೀತ ಕೇಳಿ ಬರುತ್ತಿತ್ತು ಆ ಸಂಗೀತ ಬಹಳ ಸೊಗಸಾಗಿದೆಯೆಂದು ಆ ಪಂಡಿತ ಎಂದು

ಕೊಂಡ. ಅದು ಅವನಿಗೆ ಸೊಗಸಾಗಿತ್ತೋ ಏನೊ! ಏಕೆಂದರೆ ಅವನಿಗೆ ಸೂರ್ಯನ ತಾಪವೊಂದನ್ನು ಬಿಟ್ಟು ಉಳಿದುದೆಲ್ಲವೂ ಆ ಉಷ್ಣದೇಶದಲ್ಲಿ ಸೊಗಸಾಗಿತ್ತು. ಪಂಡಿತನು ಇಳಿದುಕೊಂಡಿದ್ದ ಮನೆಯಾತನಿಗೆ ಕೂಡ ಎದುರು ಮನೆಯಲ್ಲಿ ಯಾರಿರುವರೆಂದು ತಿಳಿಯದು. ಅಲ್ಲಿ ಇದ್ದವರು ಯಾರನ್ನೂ ಅವನು ನೋಡಿರಲಿಲ್ಲ. ಅಲ್ಲಿಂದ ಕೇಳಿಬರುತ್ತಿದ್ದ ಸಂಗೀತ ಬಹಳ ಸಾಮಾನ್ಯವಾದುದೆಂದು ಅವನ ಅಭಿಪ್ರಾಯ. ಅದನ್ನು ಕೇಳಿ ಕೇಳಿ ಅವನಿಗೆ ಬೇಸರವಾಗಿತ್ತು.

"ಯಾರೋ ತನ್ನ ಕೈಲಾಗದ ಕೀರ್ತನೆಯನ್ನು ಬಾರಿಸುತ್ತಿರುವ ಹಾಗಿದೆ. ಅದೇ ಒಂದೇ ಕೀರ್ತನೆ ಹಾಡಿದ್ದೇ ಹಾಡುತ್ತಾರೆ. ಎಂದೋ ಒಂದುದಿನ ಅದು ತನಗೆ ಸಿದ್ಧಿಸುತ್ತದೆ ಎಂದು ಅವರು ತಿಳಿದುಕೊಂಡಿರಬಹುದು ಆದರೆ ಅವರು ಎಷ್ಟೇ ಬಾರಿಸಿದರೂ, ನನಗೇನೋ ಸಂದೇಹವೇ!" ಎಂದು ಆ ಮನೆಯವನು ಹೇಳಿದ.

ಒಂದು ಸಲ ಒಂದು ರಾತ್ರಿ ಆ ಪಂಡಿತನಿಗೆ ಎಚ್ಚರವಾಯಿತು. ಮುಖಶಾಲೆಯ ಬಾಗಿಲನ್ನು ತೆರೆದಿಟ್ಟು ಅವನು ಮಲಗಿದ್ದ. ಅಲ್ಲಿ ಇಳಿಬಿಟ್ಟಿದ್ದ ಪರದೆಯನ್ನು ಗಾಳಿ ಮೇಲೆ ಎತ್ತಿತ್ತು. ಆಗ ಎದುರುಮನೆಯ ಮುಖಶಾಲೆಯ ಮೇಲೆ ಏನೋ ಒಂದು ದಿವ್ಯವಾದ ಪ್ರಕಾಶ ಬಿದ್ದಿತ್ತು. ಮುಖಶಾಲೆಯಲ್ಲಿದ್ದ ಹೂಗಳೆಲ್ಲ ಬಗೆಬಗೆಯಾದ ಬಣ್ಣಗಳನ್ನು ಕಾರುತ್ತಿದ್ದುವು. ಆ ಹೂಗಳ ನಡುವೆ ಪರಮಸುಂದರಿಯಾದ ಒಬ್ಬಳು ಕನ್ಯೆ ನಿಂತಿದ್ದಳು. ಅವಳ ದೇಹದಿಂದ ದಿವ್ಯವಾದ ಬೆಳಕು ಪ್ರವಹಿಸಿ ಬಂದು ಪಂಡಿತನ ಕಣ್ಣುಗಳನ್ನು ಕೋರೈಸಿತು. ಆದರೆ ಅವನು ಆಗತಾನೆ ನಿದ್ರೆಯಿಂದ ಎಚ್ಚೆತ್ತು ಇನ್ನೂ ಆಗತಾನೆ ಕಣ್ಣುಬಿಡುತ್ತಿದ್ದ. ಥಟಕ್ಕನೆ ಹಾಸಿಗೆಯಿಂದ ಒಂದೇ ನೆಗೆತ ನೆಗೆದು, ಮೆಲ್ಲನೆ ಪರದೆಯ ಹಿಂದೆ ಸರಿದು ನಿಂತ. ಆದರೆ ಆ ಕನ್ಯೆ ಕಣ್ಮರೆಯಾದಳು, ಬೆಳಕಿನ ಪ್ರಕಾಶ ಮಾಯವಾಯಿತು, ಹೂಗಳು ಎಂದಿನ ಹಾಗೆಯೇ ಚೆಲುವಾಗಿದ್ದರೂ ಆಗತಾನೆ ಕಂಡ ಕಾಂತಿ ಅಲ್ಲಿರಲಿಲ್ಲ. ಮೊಗಸಾಲೆಯ ಹಿಂದಿನ ಬಾಗಿಲು ಅರ್ಧ ತೆರೆದಿತ್ತು, ಮನೆಯ ಒಳಭಾಗದಿಂದ ಮೋಹಕವಾದ ಸಂಗೀತ ಕೇಳಿಬಂತು. ಪಂಡಿತನ ಮನಸ್ಸಿನಲ್ಲಿ ಚಿತ್ರವಿಚಿತ್ರವಾದ ಭಾವನೆ

ಗಳು ಹುಟ್ಟಿದುವು. ಆ ಮನೆಯಲ್ಲಿ ಯಾರಿರಬಹುದು? ಆ ಮನೆಗೆ ಹೋಗು ವುದಕ್ಕೆ ಬಾಗಿಲು ಯಾವ ಕಡೆ? ಬೀದಿಯಲ್ಲಾಗಲಿ ಪಕ್ಕದ ಓಣಿಯಲ್ಲಾಗಲಿ ಸಾಲುಸಾಲಾಗಿ ಅಂಗಡಿಗಳು. ಆ ಮನೆಯವರು ಹೋಗಿ ಬರಬಹುದಾದ ಬಾಗಿಲು ಎಲ್ಲಿಯೂ ಕಾಣಿಸದು.

ಒಂದು ಸಂಜೆ ಪಂಡಿತನು ಮುಖಶಾಲೆಯಲ್ಲಿ ಕುಳಿತಿದ್ದನು. ಅವನ ಕೊಠಡಿಯಲ್ಲಿ, ಅವನ ಬೆನ್ನ ಹಿಂದೆ ಒಂದು ದೀಪ ಉರಿಯುತ್ತಿತ್ತು. ಸಹಜ ವಾಗಿ, ಅವನ ನೆರಳು ಅವನ ಎದುರುಮನೆಯ ಗೋಡೆಯಮೇಲೆ ಬಿತ್ತು. ತನ್ನ ಮುಖಶಾಲೆಯಲ್ಲಿ ಕುಳಿತು ಅವನು ಅಲುಗಾಡಿದರೆ ಅವನ ನೆರಳು ಎದುರುಮನೆಯ ಮುಖಶಾಲೆಯಲ್ಲಿ ಚಲಿಸುತ್ತಿತ್ತು.

"ಈ ಎದುರು ಮನೆಯಲ್ಲಿ ಓಡಾಡತಕ್ಕಂಥದು ನನ್ನ ನೆರಳು ಒಂದೇ ಎಂದು ಕಾಣುತ್ತದೆ. ಅದೋ, ಅಲ್ಲಿಯ ಹೂಗಳ ನಡುವೆ ನನ್ನ ನೆರಳು ಎಷ್ಟು ಸುಖವಾಗಿ ಕುಳಿತುಕೊಂಡಿದೆ. ಹಿಂದಿನ ಬಾಗಿಲು ಅರ್ಧ ತೆಗೆದಿದೆ. ಹಾಗೇ ಮೆಲ್ಲನೆ ಒಳಗೆ ನುಸುಳಿ, ಅಲ್ಲಿ ಏನಿದೆ ನೋಡಿಕೊಂಡು, ಅನಂತರ ನನ್ನ ಬಳಿಗೆ ಹಿಂದಿರುಗಿ ಬಂದು, ತಾನು ಕಂಡದ್ದನ್ನು ನನಗೆ ಹೇಳುವ ಜಾಣ ತನ ಈ ನೆರಳಿಗಿರಬಾರದೆ?" ಎಂದುಕೊಂಡು, ಚೇಷ್ಟೆಗಾಗಿ "ಏ ನೆರಳೆ! ನೀನು ಇರುವುದಕ್ಕೆ ಇಷ್ಟಾದರೂ ಕೆಲಸಮಾಡು. ಹೋಗು, ನೋಡಿ ಕೊಂಡು ಬಾ" ಎಂದು ಪಂಡಿತನು ತಲೆದೂಗಿದನು. ನೆರಳು ತಾನೂ ತಲೆದೂಗಿತು.

"ಒಳ್ಳೆಯದು. ಹೋಗು. ಆದರೆ ಅಲ್ಲಿಯೇ ನಿಂತುಬಿಡಬೇಡ." ಎಂದು ಹೇಳುತ್ತ ಪಂಡಿತನು ಒಳಕ್ಕೆ ಹೋಗಲು ಎದ್ದು ನಿಂತನು. ಎದುರಿನ ಮುಖಶಾಲೆಯಲ್ಲಿ ನೆರಳೂ ಎದ್ದು ನಿಂತಿತು. ಪಂಡಿತನು ತನ್ನ ಕೊಠಡಿಯ ಕಡೆ ತಿರುಗಿದಾಗ, ನೆರಳೂ ತಿರುಗಿತು. ಯಾರಾದರೂ ಗಮನಿಸಿದ್ದರೆ, ಪಂಡಿ ತನು ತನ್ನ ಕೊಠಡಿಯೊಳಕ್ಕೆ ಕಾಲಿಟ್ಟು ಬಾಗಿಲಪರದೆಯನ್ನು ಇಳಿಬಿಟ್ಟ ಸಮಯದಲ್ಲಿಯೇ ಆ ನೆರಳು ನೇರವಾಗಿ ಎದುರುಮನೆಯ ಮೊಗಸಾಲೆಯ ಹಿಂದಿನ ಬಾಗಿಲ ಮೂಲಕವಾಗಿ ಒಳಕ್ಕೆ ಹೋದುದನ್ನು ಕಾಣಬಹುದಾಗಿತ್ತು.

ಮಾರನೆಯ ಬೆಳಗ್ಗೆ ಪಂಡಿತನು ಕಾಫಿಯನ್ನು ಕುಡಿಯುವುದಕ್ಕಾಗಿ ಮನೆಯಿಂದ ಹೊರಗೆ ಹೊರಟು, ವೃತ್ತಪತ್ರಿಕೆಗಳನ್ನು ಓದುತ್ತ ನಿಂತ. ಬಿಸಿಲಿನಲ್ಲಿ ಹಾಗೆಯೇ ನೋಡಿಕೊಂಡು "ಇದೇನಿದು? ನನ್ನ ನೆರಳೇ ಇಲ್ಲವಲ್ಲ! ಹಾಗಾದರೆ ನೆನ್ನೆ ರಾತ್ರೆ ಆ ಎದುರುಮನೆಯ ಒಳಕ್ಕೆ ಹೋದ ನನ್ನ ನೆರಳು ಇನ್ನೂ ಹಿಂದಿರುಗಿ ಬಂದಿಲ್ಲ! ಛೆ ಛೆ ಛೆ ಛೆ!" ಎಂದುಕೊಂಡ.

ಪಂಡಿತನ ಮನಸ್ಸಿಗೆ ತುಂಬಾ ಕಿರಿಕಿರಿಯಾಯಿತು. ತನ್ನ ನೆರಳು ಮಾಯವಾದುದಕ್ಕಾಗಿ ಅವನು ಅಷ್ಟು ಚಿಂತಿಸಲಿಲ್ಲವಾದರೂ ನೆರಳಿಲ್ಲದ ಒಬ್ಬ ಮನುಷ್ಯನ ಕತೆಯೊಂದನ್ನು ಅವನು ಕೇಳಿದ್ದ. ಅವನ ಊರಿನಲ್ಲಿ ಎಲ್ಲರೂ ಆ ಕತೆಯನ್ನು ಕೇಳಿದ್ದರು. ಈಗ ತಾನು ತನ್ನ ಊರಿಗೆ ಹಿಂದಿರುಗಿ, ತಾನು ತನ್ನ ನೆರಳನ್ನು ಕಳೆದುಕೊಂಡ ಕತೆಯನ್ನು ಹೇಳಿದರೆ, ಕೇಳಿದವರೆಲ್ಲ 'ಇದು ಆ ಹಳೆಯ ಕತೆಯ ಅನುಕರಣ' ಎನ್ನಬಹುದು. ಆದರೆ ಅಂಥ ಮಾತು ಆಡಿಸಿಕೊಳ್ಳುವುದಕ್ಕೆ ಆ ಪಂಡಿತನಿಗೆ ಇಷ್ಟವಿರಲಿಲ್ಲ. ಆದ್ದರಿಂದ ಅವನು ಅದರ ವಿಷಯವನ್ನೇ ಪ್ರಸ್ತಾಪಿಸುವುದಿಲ್ಲವೆಂದು ನಿಶ್ಚಯಮಾಡಿಕೊಂಡ

ಸಂಜೆ ಅವನು ಪುನಃ ತನ್ನ ಮುಖಶಾಲೆಗೆ ಹೋದ. ಹೋಗುವಾಗ ತನ್ನ ಬೆನ್ನ ಹಿಂದೆ ಬೆಳಕನ್ನು ಇಟ್ಟುಹೋದ ಏಕೆಂದರೆ, ನೆರಳು ಯಾವಾಗಲೂ ತನ್ನ ಯಜಮಾನನನ್ನು ಆಶ್ರಯಿಸುತ್ತದೆ ಎಂಬುದು ಅವನಿಗೆ ಗೊತ್ತಿತ್ತು. ಆದರೆ ಆ ನೆರಳನ್ನು ಹೊರಗೆಳೆಯುವುದು ಅಷ್ಟು ಸುಲಭವಾಗಿರಲಿಲ್ಲ. ಪಂಡಿತನು ಮುದುರಿಕೊಂಡು ಕುಳಿತ, ನಿಮಿರಿ ಎದ್ದು ನಿಂತ. ಆದರೆ ನೆರಳೇ ಇಲ್ಲ. ನೆರಳು ಬರಲೂ ಇಲ್ಲ ಎರಡು ಮೂರು ಸಲ ಕೆಮ್ಮಿ ಕರೆದ. ಆದರೂ ನೆರಳು ಬರಲಿಲ್ಲ. 'ಛೆ ಛೆ ಛೆ ಛೆ!' ಎಂದುಕೊಂಡ.

ಆದರೆ ಉಷ್ಣದೇಶಗಳಲ್ಲಿ ಎಲ್ಲವೂ ಬಹು ಬೇಗಬೇಗ ಬೆಳೆಯುತ್ತವೆ ಒಂದುವಾರ ಕಳೆಯುವುದರೊಳಗೆ ಪಂಡಿತನು ಬಿಸಿಲಿನಲ್ಲಿ ಓಡಿಯಾಡುವಾಗ ಅವನ ಕಾಲ ಬಳಿಯಿಂದ ಒಂದು ಹೊಸ ನೆರಳು ಹುಟ್ಟಿಕೊಂಡಿತು. ಮೂರು ವಾರ ಕಳೆದಮೇಲೆ ಪಂಡಿತನ ಹೊಸ ನೆರಳು ತಕ್ಕಮಟ್ಟಿಗೆ ಬೆಳೆಯಿತು.

ಪಂಡಿತನು ತಾನು ತನ್ನ ಶೀತಪ್ರದೇಶಗಳಿಗೆ ಹಿಂದಿರುಗಿದ ಮೇಲೆಯೂ ನೆರಳು ಬೆಳೆಯುತ್ತಲೇ ಇತ್ತು. ನೋಡಿದರೆ, ನೆರಳು ಯಜಮಾನನಿಗೆ ಎರಡರಷ್ಟು ಇತ್ತು. ಪಂಡಿತನು ತನ್ನ ಊರಿಗೆ ಬಂದ ಮೇಲೆ ಸತ್ಯವನ್ನೂ ಸೌಂದರ್ಯವನ್ನೂ ಕುರಿತು ಅನೇಕ ಗ್ರಂಥಗಳನ್ನು ಬರೆದನು, ತಾನು ತನ್ನ ಸಂಚಾರಗಳಲ್ಲಿ ಕಂಡ ಅನೇಕ ಒಳ್ಳೆಯ ವಿಷಯಗಳನ್ನು ಕುರಿತು ಬರೆದನು. ಹೀಗೆಯೇ ಎಷ್ಟೋ ದಿನಗಳು, ಅನೇಕಾನೇಕ ವರುಷಗಳು ಕಳೆದುವು.

ಒಂದುದಿನ ಸಂಜೆ, ಪಂಡಿತನು ತನ್ನ ಪುಸ್ತಕಗಳ ನಡುವೆ ಕುಳಿತಿದ್ದಾಗ ಯಾರೋ ಮೃದುವಾಗಿ ಬಾಗಿಲು ತಟ್ಟಿದ ಹಾಗಾಯಿತು. ಪಂಡಿತನು 'ಒಳಗೆ ಬನ್ನಿ' ಎಂದ. ಆದರೆ ಯಾರೂ ಬರಲಿಲ್ಲ. ಪಂಡಿತನು ತಾನೇ ಎದ್ದು ಬಾಗಿಲು ತೆರೆದು ನೋಡಿದರೆ, ಅಲ್ಲಿ ಒಬ್ಬ ತೆಳ್ಳನೆಯ ಮನುಷ್ಯ ನಿಂತಿದ್ದ. ಅವನು ಅಷ್ಟು ತೆಳುವಾಗಿರುವುದನ್ನು ಕಂಡು ಪಂಡಿತನಿಗೆ ತುಂಬ ಚಿಂತೆಯಾಯಿತು. ನೋಡಿದರೆ, ಅವನು ಚೆನ್ನಾಗಿ ಉಡುಪು ಹಾಕಿಕೊಂಡು, ಸಭ್ಯನಾಗಿ ಕಾಣುತ್ತಿದ್ದ "ನೀವು ಯಾರು ?" ಎಂದು ಪಂಡಿತ ಅವನನ್ನು ಕೇಳಿದ.

ಚೆನ್ನಾಗಿ ಒಟ್ಟೋರೆ ಹಾಕಿಕೊಂಡಿದ್ದ ಆ ಅಪರಿಚಿತ "ಓ, ನಿಮಗೆ ನನ್ನ ಗುರುತು ಆಗಬಹುದು ಎಂದುಕೊಂಡಿದ್ದೆ. ಆದರೆ ನನಗೆ ಈ ಮಾಂಸದ ದೇಹ ದೊರೆತಿದೆ, ನೈತುಂಬ ಬಟ್ಟೆ ಧರಿಸಿದ್ದೇನೆ ಹೌದು, ನಿಜವೇ, ಗುರುತು ಸಿಕ್ಕುವುದು ಕಷ್ಟ. ನಾನು ಹಿಂದಿರುಗಿ ಬರುವೆನೆಂದು ನೀವು ನಿರೀಕ್ಷಿಸಿರಲಿಲ್ಲವೆಂದು ಕಾಣುತ್ತದೆ ಏಕೆ, ನಿಮ್ಮ ಹಳೆಯ ನೆರಳಿನ ಗುರುತು ಹತ್ತಲಿಲ್ಲವೇನು ? ನಿಮ್ಮನ್ನು ಆ ದಿನ ಬಿಟ್ಟುಹೋದಮೇಲೆ ನಾನು ಬಹಳ ಅಭಿವೃದ್ಧಿಹೊಂದಿದ್ದೇನೆ ಬೇಕಾದಷ್ಟು ಐಶ್ವರ್ಯ ಪಡೆದಿದ್ದೇನೆ. ಮನಸ್ಸು ಮಾಡಿದರೆ ನಿಮಗೆ ಬೇಕಾದಷ್ಟು ಹಣ ಕೊಟ್ಟು, ನಿಮ್ಮ ಸೇವೆಯಿಂದ ಬಿಡಿಸಿಕೊಂಡು, ನಾನು ಸ್ವತಂತ್ರನಾಗಿರಬಲ್ಲೆ" ಎಂದು ತನ್ನ ಗಡಿಯಾರದ ಸರಪಣಿಗೆ ಪೋಣಿಸಿದ್ದ ಹಲವು ಅಮೂಲ್ಯವಾದ ಆಭರಣಗಳನ್ನು ಕೈಯಲ್ಲಿ ತಿರುಗಿಸುತ್ತ ಹೇಳಿದ. ಅವನ ಬೆರಳುಗಳಲ್ಲಿ ವಜ್ರದ ಉಂಗುರಗಳು ಫಳಫಳ ಹೊಳೆದುವು.

"ಏನಿದು ಪರಮಾಶ್ಚರ್ಯ ? ಇದು ಹೇಗೆ ಸಾಧ್ಯವಾಯಿತು ?" ಎಂದು ಪಂಡಿತ ಕೇಳಿದ.

ಅದಕ್ಕೆ ನೆರಳು " ಹೌದು, ಆಶ್ಚರ್ಯವಾಗುವುದು ಸಹಜವೇ. ಸಾಮಾನ್ಯ ವಾಗಿ ಹೀಗೆ ಆಗುವುದಿಲ್ಲ. ಆದರೆ ನೀವೇನೂ ಸಾಮಾನ್ಯರಾದ ಮನುಷ್ಯ ರಲ್ಲ. ನಾನಂತೂ ಚಿಕ್ಕಂದಿನಿಂದಲೂ ನಿಮ್ಮ ಕಾಲುಹಿಡಿದುಕೊಂಡು ನೀವು ನಡೆದ ಹಾಗೆಯೇ ನಡೆದಿದ್ದೇನೆ ನನಗೂ ವಯಸ್ಸಾಗಿ, ಒಂಟಿಯಾಗಿ ತಿರು ಗಾಡುವುದಕ್ಕೆ ನಾನು ಯೋಗ್ಯನೆಂದು ನಿಮಗೆ ತೋರಿಬಂದಾಗ, ನಾನು ನನ್ನ ದಾರಿ ಹಿಡಿದು ಹೊರಟು, ಇದೋ ಈಗ ಈ ಅಭಿವೃದ್ಧಿಸ್ಥಿತಿಯಲ್ಲಿದ್ದೇನೆ. ಆದರೆ ನೀವು ಸಾಯುವುದಕ್ಕೆ ಮುಂಚೆ ಒಂದುಸಲ ನಿಮ್ಮನ್ನು ಕಾಣಬೇಕು ಎನ್ನಿಸಿತು. ಮತ್ತು ನಾನು ಹುಟ್ಟಿ ಬೆಳೆದ ಈ ಸ್ಥಳವನ್ನು ಇನ್ನೊಮ್ಮೆ ನೋಡಬೇಕು ಎನ್ನಿಸಿತು. ಸ್ವದೇಶದ ಮೇಲೆ ಪ್ರೀತಿಯಿರುವುದು ಸಹಜವಲ್ಲವೆ? ನೋಡಿದೆ. ನೀವೂ ಒಂದು ಹೊಸ ನೆರಳನ್ನು ಸಂಪಾದಿಸಿಕೊಂಡಿದ್ದೀರಿ ಒಳ್ಳೆಯದು. ಇಷ್ಟುದಿನ ನನ್ನನ್ನು ಸಾಕಿ ಬೆಳೆಸಿದ್ದದ್ಕಾಗಿ ನಾನು ನಿಮಗೆ ಏನು ಕೊಡಬೇಕು ? •ಹೇಳಿ, ಏನೂ ಸಂಕೋಚಬೇಡ" ಎಂದಿತು.

" ಓ, ನೀನು ನಿಜವಾಗಿಯೂ ನನ್ನ ನೆರಳೇ ಹೌದೇನು ? ಇದು ನಿಜ ವಾಗಿಯೂ ಪರಮಾಶ್ಚರ್ಯವೇ ಹೌದು. ಮನುಷ್ಯನಾದವನ ಹಳೆಯ ನೆರಳು ತಾನೂ ಮನುಷ್ಯನಾಗಲು ಸಾಧ್ಯವೆಂದು ನಾನು ಎಣಿಸಿರಲಿಲ್ಲ" ಎಂದು ಪಂಡಿತನು ಹೇಳಿದನು.

" ಅದೆಲ್ಲ ಸರಿ, ನಾನು ನಿಮಗೆ ತೀರಿಸಬೇಕಾದ ಋಣ ಏನು ? ಹೇಳಿ ಯಾರ ಹಂಗಿಗೂ ಒಳಗಾಗಿರುವುದಕ್ಕೆ ನನಗೆ ಇಷ್ಟವಿಲ್ಲ" ಎಂದು ನೆರಳು ಹೇಳಿತು.

ಅದಕ್ಕೆ ಪಂಡಿತ " ಛೆ ಛೆ! ಎಂಥ ಮಾತನಾಡುತ್ತೀಯೆ ? ನನಗೂ ನಿನಗೂ ಋಣದ ಮಾತು ಏನುಬಂತು ? ನೀನೂ ನನ್ನ ಹಾಗೆಯೇ ಸ್ವತಂತ್ರ. ನಿನ್ನ ಅದೃಷ್ಟವನ್ನು ನೋಡಿ ನನಗೆ ತುಂಬಾ ಸಂತೋಷವಾಗಿದೆ. ನೀನು ನನ್ನ ಸ್ನೇಹಿತನ ಹಾಗೆ. ಬಾ, ಕುಳಿತುಕೊ. ಕುಳಿತುಕೊಂಡು, ನಾವು



ಪಂಡಿತನ ನೆರಳು

ಪಂಡಿತನೂ ಅವನ ಹಳೆಯ ನೆರಳೂ

## ಪಂಡಿತನ ನೆರಳು

ನೆರಳು ತಾನು ಆಶ್ರಯಿಸಿಕೊಂಡಿದ್ದ ಮನುಷ್ಯನನ್ನು ಬಿಟ್ಟು ಸ್ವತಂತ್ರನಾಗಿ ಹೋಗುವುದು ಅಸಂಭವ, ನಿಜ. ಆದರೆ ನೆರಳಿನ ಹಾಗೆ ಪರಾವಲಂಬಿಗಳಾದ ಎಷ್ಟೋ ಜನ, ಅವಕಾಶ ದೊರೆತೊಡನೆ, ಸ್ವಲ್ಪ ಅನುಕೂಲ ಒದಗಿದೊಡನೆ, ಹಿಂದಿನ ಆಶ್ರಯವನ್ನು ಮರೆತುಹೋಗುವುದಿಲ್ಲವೆ?

ನೆರಳು ತಾನು ಮನುಷ್ಯನಂತೆ ಮೈಕೊಡಿಕೊಂಡು ತನಗೆ ಆಶ್ರಯವಾಗಿದ್ದ ಮನುಷ್ಯನೆದುರು ಮೆರೆಯುವುದು ಅಸಂಭವ, ನಿಜ ಆದರೆ ನೆರಳಿನ ಹಾಗಿದ್ದವರು ಎಷ್ಟೋ ಜನ, ಸ್ವಲ್ಪ ಅವಕಾಶ ದೊರೆತೊಡನೆ, ಸ್ವಲ್ಪ ಅನುಕೂಲ ಒದಗಿದೊಡನೆ, ತಮಗೆ ಆಶ್ರಯವಾಗಿದ್ದವರ ಸರಿಸಮಾನಸ್ಕಂಧರಂತೆ ಮೆರೆಯುವುದಿಲ್ಲವೆ?

ನೆರಳಾಗಿದ್ದುದು ತನ್ನ ಯಜಮಾನನ ಸಾವಿಗೆ ಕಾರಣವಾಗುವುದು ಅಸಂಭವ, ನಿಜ. ಆದರೆ ನೆರಳಿನಂಥ ಎಷ್ಟೋ ಜನ, ತಮ್ಮ ಸ್ವಾರ್ಥವನ್ನು ಸಾಧಿಸಿಕೊಳ್ಳುವುದಕ್ಕಾಗಿ, ಹಿಂದಿನ ಉಪಕಾರವನ್ನು ಮರೆತು, ಕೃತಘ್ನರಾಗಿ, ತಮಗೆ ನೆರಳು ಕೊಟ್ಟ ಮರವನ್ನೇ ಬುಡಸಹಿತವಾಗಿ ನಾಶಮಾಡುವುದಿಲ್ಲವೆ?

ಎಂದ ಮೇಲೆ, ಈ ನೆರಳಿನ ಕತೆ ನಿಜದ ಕತೆಯಲ್ಲವೆ?

ಆ ಉಷ್ಣದೇಶಗಳಲ್ಲಿ ಇದ್ದಾಗ ಆ ಎದುರುಮನೆಯಲ್ಲಿ ನೀನು ಏನೇನು ಕಂಡೆ ಎಂಬುದನ್ನು ನನಗೂ ಸ್ವಲ್ಪ ಹೇಳು " ಎಂದನು.

" ಹಾಗೇ ಆಗಲಿ. ಹೇಳುತ್ತೇನೆ " ಎಂದು ನೆರಳು ಅಲ್ಲಿದ್ದ ಕುರ್ಚಿಯ ಮೇಲೆ ಕುಳಿತುಕೊಂಡು, " ಆದರೆ ಮಾತ್ರ, ನಾನು ನಿಮ್ಮ ನೆರಳಾಗಿದ್ದೆನೆಂದು ಈ ಊರಿನಲ್ಲಿ ಯಾರಿಗೂ ತಿಳಿಸುವುದಿಲ್ಲವೆಂದು ನೀವು ನನಗೆ ವಾಗ್ದಾನಮಾಡಬೇಕು. ನಾನೂ ಮದುವೆ ಮಾಡಿಕೊಂಡು ಸಂಸಾರ ನಡೆಸಬೇಕೆಂದಿದ್ದೇನೆ. ಸಂಸಾರ ನಡಸುವುದಕ್ಕೆ ಬೇಕಾದ ಸಂಪತ್ತೂ ನನಗಿದೆ " ಎಂದಿತು.

" ನೀನು ಅದರ ಬಗೆಗೆ ಏನೂ ಚಿಂತಿಸಬೇಡ. ನೀನು ಯಾರೆಂಬುದನ್ನು ನಾನು ಯಾರಿಗೂ ತಿಳಿಸುವುದಿಲ್ಲ. ಇದೋ, ಕೈಮೇಲೆ ಕೈಹಾಕಿ ಹೇಳುತ್ತೇನೆ. ಇದು ಮನುಷ್ಯಮನುಷ್ಯರಿಗೆ ಆದ ಒಪ್ಪಂದ " ಎಂದು ಪಂಡಿತ ಹೇಳಿದ.

" ಮನುಷ್ಯಮನುಷ್ಯರಿಗೆ ಆದ ಒಪ್ಪಂದವಲ್ಲ, ಮನುಷ್ಯನಿಗೂ ನೆರಳಿಗೂ ಆದ ಒಪ್ಪಂದ " ಎಂದಿತು ನೆರಳು. ಆ ಮಾತು ನೆರಳಿನ ಬಾಯಿಂದ ತಾನಾಗಿಯೇ ಬಂತು.

ನಿಜವಾಗಿಯೂ ಆ ನೆರಳು ಮನುಷ್ಯನ ಹಾಗೆ ಆಗಿದ್ದುದನ್ನು ನೋಡಿದರೆ ಆಶ್ಚರ್ಯವಾಗುತ್ತಿತ್ತು. ಆ ಬಟ್ಟೆಬರೆಗಳೋ, ಆ ವೇಷಭೂಷಣಗಳೋ, ಆ ಗಡಿಯಾರದ ಸರಪಣಿಯೋ, ಅದಕ್ಕೆ ತಗುಲಿಸಿದ್ದ ಆಭರಣಗಳೋ, ಆ ಎರಡು ಕೈಗಳ ಬೆರಳುಗಳಿಗೆ ಹಾಕಿದ ಉಂಗುರಗಳೋ, ನೋಡಿದರೆ ಆಶ್ಚರ್ಯವಾಗುತ್ತಿತ್ತು. ಇದು ನೆರಳು ಎಂದು ಹೇಳಿದರೆ ಯಾರೂ ನಂಬುವ ಹಾಗಿರಲಿಲ್ಲ.

" ಒಳ್ಳೆಯದು. ನೀವು ತಿಳಿಯಲು ಕುತೂಹಲಪಡುತ್ತಿರುವ ವಿಷಯವನ್ನು ನಿಮಗೆ ತಿಳಿಸುತ್ತೇನೆ. ಕೇಳಿ " ಎಂದು ನೆರಳು ಆ ಪಂಡಿತನ ಕಾಲ ಬಳಿಯಲ್ಲಿ ನಾಯಿಯ ಹಾಗೆ ಮಲಗಿದ್ದ ಹೊಸ ನೆರಳಿನ ತೋಳಿನಮೇಲೆ ತನ್ನ ಎಡಗಾಲಿನ ಪಾದರಕ್ಷೆಯನ್ನು ಬಲವಾಗಿ ಊರಿ ಹೇಳಿತು. ಇದೇನು, ತಾನು ಮನುಷ್ಯನೆಂಬ ಅಹಂಕಾರದಿಂದ ಹಾಗೆ ಮಾಡಿತೋ, ಅಥವಾ ಆ ಹೊಸ

ನೆರಳು ತನಗೆ ಅಂಟಿಕೊಳ್ಳಲೆಂಬ ಆಸೆಯಿಂದ ಹಾಗೆ ಮಾಡಿತೋ ತಿಳಿಯದು. ಆದರೆ ಆ ಮಲಗಿದ್ದ ನೆರಳು ಮಾತ್ರ ಸ್ವಲ್ಪವೂ ಅಲುಗಾಡದೆ, ತನ್ನ ಯಜಮಾನನನ್ನು ಬಿಟ್ಟು ಹೋದ ನೆರಳು ತಾನೂ ಹೇಗೆ ಮನುಷ್ಯನಾಗುವುದು ಎಂಬ ಅಪೂರ್ವವಾದ ಗುಟ್ಟನ್ನು ತಿಳಿಯಬೇಕೆಂದು ಶಾಂತವಾಗಿ ಮಲಗಿತ್ತು.

"ಆ ಸಾವು ಇದ್ದ ಮನೆಯ ಎದುರು ಮನೆಯಲ್ಲಿ ದೇವಲೋಕದಿಂದಲೇ ಬಂದಂಥ ದಿವ್ಯಸುಂದರಿ ಇದ್ದಳು ಎಂಬುದು ನಿಮಗೆ ಗೊತ್ತೆ? ಓ, ಅವಳು ಸಾಕ್ಷಾತ್ ಸರಸ್ವತಿಯ ಹಾಗಿದ್ದಳು. ನಾನೂ ಅಲ್ಲಿ ಮೂರು ವಾರ ಇದ್ದೆ. ಆದರೂ ಮೂರು ಸಾವಿರ ವರುಷಗಳ ಹಾಗಿತ್ತು. ಆ ಕಾಲದಲ್ಲಿ ನಾನೂ ತುಂಬ ಗದ್ಯ, ಪದ್ಯ ಓದಿದೆ. ನನಗೂ ತುಂಬ ತಿಳಿವಳಿಕೆ ಬಂತು, ನಾನೂ ಜ್ಞಾನ ಸಂಪಾದಿಸಿದೆ" ಎಂದು ನೆರಳು ಹೇಳಿತು.

ಅದಕ್ಕೆ ಪಂಡಿತನು "ಸರಸ್ವತಿ ಎಂದು ಹೇಳಿದೆಯ! ಆಕೆ ಋಷಿಯ ಹಾಗೆ ಆ ಮಹಾಪಟ್ಟಣದಲ್ಲಿ ಏಕಾಂತವಾಗಿ ವಾಸವಾಗಿದ್ದಳು. ಸರಸ್ವತಿ ಎಂದೆಯ! ನಾನು ಅವಳನ್ನು ಕಂಡದ್ದು ಒಂದು ಕ್ಷಣ ಮಾತ್ರ. ಅದೂ ಆಗ ತಾನೆ ನಿದ್ರೆಯಿಂದ ಎದ್ದಾಗ. ಅವಳು ಆ ಮುಖಶಾಲೆಯಲ್ಲಿ, ಆ ಬಣ್ಣ ಬಣ್ಣದ ಹೂಗಳ ನಡವೆ, ಸಾಕ್ಷಾತ್ತಾದ ಇಂದ್ರಧನುಸ್ಸಿನ ಹಾಗೆ ಪ್ರಕಾಶಿಸುತ್ತಿದ್ದಳು. ಹೇಳು, ನೀನು ಆ ಸಂಜೆ ಆ ಮನೆಯ ಮುಖಶಾಲೆಯಲ್ಲಿದ್ದೆ ಅಲ್ಲವೆ? ಅಲ್ಲಿಂದ ಮನೆಯೊಳಕ್ಕೆ ಹೋದೆ. ಆಮೇಲೆ? ಅಲ್ಲೇನು ನೋಡಿದೆ?" ಎಂದನು.

ಅದಕ್ಕೆ ನೆರಳು "ಬಾಗಿಲಿನಿಂದ ಒಳಕ್ಕೆ ಹೋದ ಒಡನೆ ಪಕ್ಕದಲ್ಲಿ ಒಂದು ಸಣ್ಣ ಕೊಠಡಿಯಿತ್ತು. ನೀವು ಇನ್ನೂ ಎದುರು ಮುಖಶಾಲೆಯಲ್ಲೇ ಕುಳಿತು ದೃಷ್ಟಿಸಿ ನೋಡುತ್ತಿದ್ದಿರಿ. ಅಲ್ಲಿ ಅಷ್ಟೇನೂ ಬೆಳಕು ಇರಲಿಲ್ಲ. ಇನ್ನೂ ಮಸಕುಮಸಕಾಗಿತ್ತು. ಹೆಚ್ಚು ಬೆಳಕು ಇದ್ದಿದ್ದರೆ ನಾನೆಲ್ಲಿ ಬದುಕುತ್ತಿದ್ದೆ? ಆದರೆ ಒಳಗೆ ತುಂಬ ಪ್ರಕಾಶವಿತ್ತು ಅದರ ಹತ್ತಿರದಲ್ಲೇ ಆ ಕನ್ಯೆ ಇದ್ದಳು. ನಾನೂ ಬಹಳ ಜಾಗರೂಕತೆಯಿಂದ ನಿಂತು ನೋಡುತ್ತಿದ್ದೆ" ಎಂದಿತು.

"ಅಲ್ಲಿ ನೀ ಏನು ಕಂಡೆ?" ಎಂದ ಪಂಡಿತ.

"ಅಲ್ಲಿ ನಾನು ಎಲ್ಲವನ್ನೂ ಕಂಡೆ. ಕಂಡದ್ದನ್ನೆಲ್ಲ ಹೇಳುತ್ತೇನೆ, ಕೇಳಿ. ಆದರೆ, ಒಂದು ಮಾತು, ನಾನು ಅಹಂಕಾರದಿಂದ ಹೇಳುತ್ತಿಲ್ಲ, ನನಗೆ ಜ್ಞಾನವಿದೆ, ಸ್ಥಾನವಿದೆ, ಸಂಪತ್ತಿದೆ, ನಾನೂ ಸ್ವತಂತ್ರ, ಇಂಥ ನನ್ನನ್ನು **ನೀನು** ಎಂದು ಸಂಬೋಧಿಸುವುದು ಬಿಟ್ಟು **ನೀವು** ಎಂದು ಕರೆದರೆ ಮೇಲು" ಎಂದು ನೆರಳು ಹೇಳಿತು.

ಅದಕ್ಕೆ ಪಂಡಿತನು "ನಿಜ, ನಿಜ. ತಪ್ಪಾಯಿತು. ಅದು ಹಿಂದಿನಿಂದ ಬಂದ ಹಳೆಯ ಅಭ್ಯಾಸ. ಬಿಡುವುದು ಸುಲಭವಲ್ಲ. ಹೌದು, ನೀವು ಹೇಳಿದ್ದು ಸರಿ ಪ್ರಯತ್ನಪಡುತ್ತೇನೆ. ಮುಂದೆ ನೀವು ಕಂಡದ್ದನ್ನು ಹೇಳಿ" ಎಂದನು.

"ನಾನು ಅಲ್ಲಿ ಎಲ್ಲವನ್ನೂ ಕಂಡೆ. ಕಂಡದ್ದು ಮಾತ್ರವಲ್ಲ, ಎಲ್ಲವನ್ನೂ ಕೇಳಿದೆ" ಎಂದಿತು ನೆರಳು.

"ಅಲ್ಲಿ ಆ ಮನೆಯ ಒಳಭಾಗ ಹೇಗಿತ್ತು? ತಂಪಾದ ವನಗಳ ಹಾಗಿತ್ತೆ? ಪವಿತ್ರವಾದ ದೇವಾಲಯದ ಹಾಗಿತ್ತೆ? ಮಿಣುಕುವ ನಕ್ಷತ್ರಗಳು ತುಂಬಿದ ಆಕಾಶಕ್ಕೆ ಮುತ್ತಿಡುವ ಪರ್ವತಶಿಖರದ ಹಾಗಿತ್ತೆ?" ಎಂದು ಪಂಡಿತ ಕೇಳಿದ.

ನೆರಳು "ನೀವು ಹೇಳುವ ಎಲ್ಲ ವರ್ಣನೆಗಳ ಹಾಗೂ ಇತ್ತು. ಆದರೆ ನಾನು ಆ ಒಳಮನೆಯಲ್ಲಿ ಕಾಲಿಡಲಿಲ್ಲ. ಪಕ್ಕದ ಕೊಠಡಿಯ ಆ ಮಸಕು ಬೆಳಕಿನಲ್ಲೇ ನಿಂತಿದ್ದೆ. ಆದರೆ ತಾನೆ ಏನು? ಆ ಸರಸ್ವತಿಯ ಸಭೆಯಲ್ಲಿ ನೋಡಬೇಕಾದ್ದನ್ನೆಲ್ಲ ನೋಡಿದೆ, ಕೇಳಬೇಕಾದ್ದನ್ನೆಲ್ಲ ಕೇಳಿದೆ" ಎಂದಿತು.

"ಏನೇನು ನೋಡಿದಿರಿ, ಹೇಳಿ. ದೇವತೆಗಳೆಲ್ಲ ಅಲ್ಲಿ ಬಂದು ಹೋದರೇನು? ರಾಕ್ಷಸರು ತಮ್ಮ ಯುದ್ಧಗಳನ್ನು ಅಲ್ಲಿ ಪುನಃ ಆಡಿದರೇನು? ಆಟವಾಡುವ ಸಣ್ಣ ಮಕ್ಕಳು ತಮ್ಮ ದಿವ್ಯವಾದ ಕನಸುಗಳನ್ನು ಅಲ್ಲಿ ಹೇಳಿಕೊಡರೇನು?"

ಅದಕ್ಕೆ ನೆರಳು "ನಾನು ಅಲ್ಲಿ ಒಳಗೆ ಹೋಗಿದ್ದೆ ಎಂದು ಹೇಳಲಿಲ್ಲವೆ? ಆದ್ದರಿಂದ ಅಲ್ಲಿ ನೋಡಬೇಕಾದುದನೆಲ್ಲ ನಾನು ನೋಡಿದೆನೆಂದು ನೀವು ನಂಬಬಹುದು. ನೀವೂ ಅಲ್ಲಿ ಹೋಗಿದ್ದರೆ, ನಾನು ಹೇಗೆ ಮನುಷ್ಯನಾದೆನೋ ಹಾಗೆ, ನೀವು ಮನುಷ್ಯರೆಲ್ಲರನ್ನೂ ಮೀರಿಸಬಹುದಾಗಿತ್ತು. ನನಗೂ ಕವಿಹೃದಯವಿದೆ ಎಂಬುದು ಅಲ್ಲಿಯವರೆಗೂ ನನಗೆ ಗೋಚರವಾಗಿರಲಿಲ್ಲ. ನಿಜ, ನಿಮ್ಮ ಜೊತೆಯಲ್ಲಿರುವಾಗ ನಾನು ಆ ವಿಷಯವನ್ನು ಕುರಿತು ಯೋಚಿಸುತ್ತಿರಲಿಲ್ಲ. ಆದರೂ ಸೂರ್ಯ ಹುಟ್ಟುವಾಗಲೂ ಸೂರ್ಯ ಮುಳುಗುವಾಗಲೂ ನನ್ನ ಆಕಾರ ಎಷ್ಟು ದೊಡ್ಡದಾಗಿರುತ್ತಿತ್ತು ಎಂಬುದು ನಿಮಗೆ ನೆನಪಿರಬಹುದು ಅದರಂತೆಯೇ ಬೆಳುದಿಂಗಳಿನಲ್ಲಿ ನಾನು ನಿಮಗಿಂತ ಹೆಚ್ಚು ಸ್ಪಷ್ಟವಾಗಿ ಕಾಣಿಸಿಕೊಳ್ಳುತ್ತಿದ್ದೆನೆಂಬುದೂ ನಿಮಗೆ ಜ್ಞಾಪಕವಿರಬಹುದು. ಆದರೆ ಆ ಮನೆಯೊಳಕ್ಕೆ ಹೋಗುವವರೆಗೆ ನನ್ನ ಅಂತರ್ಯ ನನಗೇ ಗೊತ್ತಿರಲಿಲ್ಲ. ಅಲ್ಲಿ ನನಗೆ ನನ್ನ ನಿಜವಾದ ಯೋಗ್ಯತೆ ತಿಳಿದುಬಂತು ನಾನು ಮನುಷ್ಯನಾದೆ, ಪೂರ್ಣವಾಗಿ ಬೆಳೆದೆ. ಆದರೆ ಆ ವೇಳೆಗಾಗಲೇ ನೀವು ಆ ದೇಶವನ್ನು ಬಿಟ್ಟು ಹೊರಟಿದ್ದಿರಿ. ಆಗ ತಾನೆ ಮನುಷ್ಯನಾಗಿದ್ದ ನನಗೆ ತಕ್ಕ ಬಟ್ಟೆಬರೆಗಳಿಲ್ಲದೆ ಹೊರಗೆ ಬರುವುದಕ್ಕೆ ನಾಚಿಕೆಯಾಯಿತು. ಆ ಕಾರಣದಿಂದ ನಾನು ನನ್ನ ದಾರಿ ಹಿಡಿದೆ. ನೀವು ಇದನ್ನೆಲ್ಲ ಒಂದು ಪುಸ್ತಕವಾಗಿ ಬರೆಯುವುದಿಲ್ಲವೆಂಬ ಭರವಸೆಯಿಂದ ಇದನ್ನು ನಿಮಗೆ ಹೇಳುತ್ತಿದ್ದೇನೆ. ಎಣ್ಣೆ ಮಾರುವವಳೊಬ್ಬಳ ಸೆರಗಿನಲ್ಲಿ ನಾನು ಅವಿತುಕೊಂಡಿದ್ದೆ. ಅವಳಿಗೆ ಮಾತ್ರ ನಾನು ಅಲ್ಲಿದ್ದುದು ಗೊತ್ತಾಗಲಿಲ್ಲ. ಸಂಜೆಯಾದ ಮೇಲೆ ನಾನು ಧೈರ್ಯ ಮಾಡಿಕೊಂಡು ಹೊರಗೆ ಬಂದೆ ರಾತ್ರಿ ಬೆಳುದಿಂಗಳಿನಲ್ಲಿ ಬೀದಿಗಳಲ್ಲೆಲ್ಲ ಓಡಿಯಾಡಿದೆ. ನನ್ನ ಪೂರ್ತಿ ಎತ್ತರವನ್ನೂ ಗೋಡೆಗಳ ಮೇಲೆ ಉದ್ದಕ್ಕೂ ಚಾಚಿದೆ. ಕೆಲವು ಸಲ ನಾನು ನಿಮಗಿಂತ ಎತ್ತರವಿದ್ದೆ ಎಂಬುದು ಜ್ಞಾಪಕವಿದೆ ತಾನೆ? ಅಲ್ಲಿ, ಇಲ್ಲಿ, ಎಲ್ಲ ಕಡೆಗೂ ಓಡಿಯಾಡಿದೆ. ಎತ್ತರದ ಕಿಟಕಿಗಳ ಮೂಲಕ, ಮನೆಯ ಮೇಲ್ಛಾವಣಿಗಳಿಂದ ಮನೆಗಳೊಳಗೆ ನೋಡಿದೆ. ಇತರರು ಯಾರೂ ಸಾಮಾನ್ಯವಾಗಿ ಕಾಣಲಾರದ ದೃಶ್ಯಗಳನ್ನು ಕಂಡೆ. ಛೆಛೆ! ಎಂಥ ಕೆಟ್ಟ ಲೋಕ! ಎಷ್ಟು ಕೆಟ್ಟ ಜನ! ಅದನ್ನು ನೋಡಿದ ಮೇಲೆ ಮನುಷ್ಯನಾಗಿರುವುದೇ ನನಗೆ ರುಚಿಸಲಿಲ್ಲ. ಆದರೂ ಈ

ಲೋಕದಲ್ಲಿ ಮನುಷ್ಯರಿಗೆ ತುಂಬ ಮಾನ್ಯತೆಯುಂಟು ಗಂಡಹೆಂಡಿರಿಗೂ ತಂದೆಮಕ್ಕಳಿಗೂ ಅದೇನು ಜಗಳಗಳು, ಅದೇನು ಬಡಿದಾಟಗಳು! ಒಂದೊಂದು ಮನೆಯಲ್ಲೂ ನಾನು ಕಂಡ ದುರ್ನಡತೆಗಳನ್ನು ತಿಳಿಸಿದರೆ ನೆರೆ ಹೊರೆಯವರು ಎಷ್ಟು ಸಂತೋಷಪಟ್ಟಾರೊ! ಅದನ್ನು ನಾನು ವೃತ್ತಪತ್ರಿಕೆ ಗಳಿಗೆ ಬರೆದರೆ, ಎಷ್ಟು ಜನ ಕಣ್ಣು ಬಾಯಿ ಬಿಟ್ಟುಕೊಂಡು ಅದನ್ನು ಓದು ವರೊ! ಆದರೆ ನಾನು ಹಾಗೇನೂ ಮಾಡಲಿಲ್ಲ ಅದಕ್ಕೆ ಬದಲು ಆಯಾ ಸಂಬಂಧಪಟ್ಟ ಜನರಿಗೇ ನೇರವಾಗಿ ಬರೆದೆ ಓಹೋಹೋಹೊ! ಊರಲ್ಲಿ ಏನು ರಂಪ ಹತ್ತಿಕೊಂಡಿತು, ಗೊತ್ತೆ? ಎಲ್ಲರಿಗೂ ನಾನೆಂದರೆ ಅತಿ ಭಯ ವಾದರು ಕೂಡ, ಎಲ್ಲರೂ ನನ್ನನ್ನು ಬಹಳ ಪ್ರೀತಿಯಿಂದ ಕಾಣುತ್ತಿದ್ದರು. ಮಹಾಪಂಡಿತನೊಬ್ಬ ನನಗೂ ಮಹಾಪಂಡಿತನೆಂದು ಬಿರುದುಕೊಟ್ಟ. ಬಟ್ಟೆಯಂಗಡಿಯವನೊಬ್ಬ ನನಗೆ ಬೇಕಾದ ಹೊಸಬಟ್ಟೆ ಹೊಲಿಸಿಕೊಟ್ಟ. ಖಜಾನೆಯ ಅಧಿಕಾರಿ ನನ್ನ ಜೇಬು ತುಂಬ ಹಣ ತುಂಬಿದ ಹೆಂಗಸರೆಲ್ಲ ನನ್ನ ಸೌಂದರ್ಯವನ್ನು ಹೊಗಳಿ ಹಾಡಿದರು. ಇದೋ, ಹೀಗೆ ನಾನೂ ಒಬ್ಬ ಮನುಷ್ಯನಾದೆ. ಒಳ್ಳೆಯದು, ಇನ್ನು ನಾನು ಹೋಗಿಬರುತ್ತೇನೆ ಇದೋ, ಈ ಕಾಗದದಲ್ಲಿ ನನ್ನ ವಿಳಾಸವನ್ನು ಬರೆದಿದ್ದೇನೆ. ಆ ಬೀದಿಯಲ್ಲಿ ಸೂರ್ಯನ ಬೆಳಕು ಬೀಳುವ ಕಡೆ ನಾನು ವಾಸವಾಗಿದ್ದೇನೆ. ಮೋಡ ಮುಚ್ಚಿಕೊಂಡಾಗ ಮಾತ್ರ ನಾನು ಮನೆಬಿಟ್ಟು ಕದಲುವುದಿಲ್ಲ" ಎಂದಿತು. ಹೀಗೆಂದು ಹೇಳಿ, ನೆರಳು ಎದ್ದುಹೋಯಿತು.

ಪಂಡಿತ "ಇದೇನು, ಬಹಳ ಆಶ್ಚರ್ಯವಾಗಿದೆಯಲ್ಲ!" ಎಂದುಕೊಂಡ.

ವರ್ಷಗಳು ಕಳೆದುವು, ದಿನಗಳೂ ವರ್ಷಗಳೂ ಕಳೆದುವು. ನೆರಳು ಪುನಃ ಪಂಡಿತನ ಬಳಿಗೆ ಬಂತು. "ಹೇಗಿದ್ದೀಯೆ?" ಎಂದು ಕೇಳಿತು.

"ಓ! ಹೀಗೇ! ಸತ್ಯ, ಶಿವ, ಸುಂದರ ಇವುಗಳನ್ನು ಕುರಿತು ಬರೆ ಯುತ್ತಿದ್ದೇನೆ. ಆದರೆ ಅವುಗಳಿಗೆ ಯಾರೂ ಅಷ್ಟು ಗಮನಕೊಡುವುದಿಲ್ಲ. ಏನು ಮಾಡಬೇಕೋ ಕಾಣೆ ಜನರ ಅಲಕ್ಷ್ಯ ಕಂಡು ನನಗಂತೂ ಬಹಳ ಸಂಕಟವಾಗುತ್ತದೆ" ಎಂದು ಪಂಡಿತ ಹೇಳಿದ.

ಅದಕ್ಕೆ ನೆರಳು "ನೀವು ಇದನ್ನು ಮನಸ್ಸಿಗೆ ಇಷ್ಟು ಹಚ್ಚಿಕೊಳ್ಳಬಾರದು. ಈಗ ನನ್ನನ್ನು ನೋಡಿ, ಎಷ್ಟು ದಪ್ಪವಾಗಿದ್ದೇನೆ, ಎಷ್ಟು ಬೊಜ್ಜು ಬೆಳೆದಿದೆ! ನೀವೂ ಹೀಗೇ ಆಗಬೇಕು. ನಿಮಗೆ ಇನ್ನೂ ಲೋಕ ತಿಳಿಯದು. ಸುಮ್ಮನೆ ವ್ಯರ್ಥವಾಗಿ ಕೊರಗುತ್ತೀರಿ. ನೀವು ಹೀಗೆ ಇರಬಾರದು. ದೇಶ ದೇಶಾಂತರ ಪ್ರವಾಸಮಾಡಿ. ಈ ಬೇಸಗೆಯಲ್ಲಿ ನಾನು ಸಂಚಾರ ಹೊರಡುತ್ತೇನೆ ನೀವೂ ನನ್ನೊಡನೆ ಬನ್ನಿ. ನನಗೆ ಯಾರಾದರೂ ತಕ್ಕವರು ಜೊತೆಗ ಬೇಕಾಗಿದೆ ನೀವು ಬಂದು ನನ್ನ ನೆರಳಾಗುವುದಾದರೆ ನನಗೆ ಪರಮ ಸಂತೋಷ. ನಿಮ್ಮ ವೆಚ್ಚವೆಲ್ಲವನ್ನೂ ನಾನೇ ವಹಿಸಿಕೊಳ್ಳುತ್ತೇನೆ'' ಎಂದಿತು

"ಬಹಳ ದೂರ ಪ್ರಯಾಣ ಹೋಗುವಿರೇನು?'' ಎಂದು ಪಂಡಿತ ಕೇಳಿದ

"ಏನೋ! ಹೇಗೋ! . ತಾ ಪ್ರವಾಸ ಮಾಡಿದರೆ ನಿಮ್ಮ ಪ್ರಕೃತಿಗೆ ಒಳ್ಳೆಯದು. ನನ್ನ ನೆರಳಾಗಿ ಬನ್ನಿ, ನಿಮ್ಮ ಎಲ್ಲಾ ವೆಚ್ಚವನ್ನೂ ನಾನು ಕೊಡುತ್ತೇನೆ" ಎಂದು ನೆರಳು ಹೇಳಿತು

"ಛೆ! ಏನು ನೀವು ಹೇಳುವುದು? ಅಸಂಬದ್ಧ ಪ್ರಲಾಪ!" ಎಂದ ಪಂಡಿತ.

"ಲೋಕದ ದಾರಿಯೇ ಹೀಗೆ ಯಾವ ಕಾಲಕ್ಕೂ ಹೀಗೆಯೇ'' ಎಂದು ಹೇಳಿ ನೆರಳು ಹೊರಟುಹೋಯಿತು.

ಇದಾದ ಮೇಲೆ ಆ ಪಂಡಿತನು ಯಾವ ಕೆಲಸ ಕೈಕೊಂಡರೂ ಅದು ಊರ್ಜಿತವಾಗಲಿಲ್ಲ ಕಷ್ಟಗಳೂ ದುಃಖಗಳೂ ಮೇಲಿಂದ ಮೇಲೆ ಅವನ ಬೆನ್ನಟ್ಟಿದುವು. ಸತ್ಯ, ಶಿವ, ಸುಂದರ ಎಂದು ಅವನು ಹೇಳಿ ಬರೆದುದೆಲ್ಲ ಕೋಣನ ಮುಂದೆ ಕಿನ್ನರಿ ಬಾರಿಸಿದ ಹಾಗಾಯಿತು. ಕೊನೆಗೆ ಅವನು ಕಾಯಿಲೆ ಮಲಗಿದ. ನೋಡಿದವರೆಲ್ಲ "ಇದೇನು? ನೆರಳಿನ ಹಾಗೆ ಆಗುತ್ತಿದ್ದೀಯೆ?" ಎಂದು ಹೇಳಿದಾಗ ಮೈಯೆಲ್ಲ ಚಳಿಚಳಿಯಾಗಿ ನಡುಕ ಹುಟ್ಟುತ್ತಿತ್ತು. ನೆರಳೆಂಬ ಹೆಸರು ಕೇಳಿದರೆ ಅವನ ಮನಸ್ಸು ಹೇಗೆ ಹೇಗೋ ಆಗುತ್ತಿತ್ತು.

ನೆರಳು ಇನ್ನೊಂದು ಸಲ ಪಂಡಿತನ ಬಳಿಗೆ ಬಂತು. "ಛೆಛೆ! ನೀವು ಎಲ್ಲಿಯಾದರೂ ಸ್ಥಳ ಬದಲಾಯಿಸಬೇಕು. ಹೀಗಿದ್ದರೆ, ನೀವು ಬದುಕುವ ಹಾಗಿಲ್ಲ. ನೀವು ಸುಮ್ಮನೆ ನನ್ನ ಸಂಗಡ ಬನ್ನಿ. ನೀವೇನು ನನಗೆ ಹೊಸ ಬರೆ? ನಿಮ್ಮ ವೆಚ್ಚವನ್ನೆಲ್ಲ ನಾನು ವಹಿಸುತ್ತೇನೆ. ನಾವು ಹೋಗುವ ದೇಶಗಳನ್ನೆಲ್ಲ ನೀವು ಕಾವ್ಯದಲ್ಲಿ ವರ್ಣಿಸಿ ನಾವೂ ಓದಿ ಸಂತೋಷಪಡೋಣ. ನಾನು ಯಾವುದಾದರೂ ಆರೋಗ್ಯದ ಸ್ಥಳಕ್ಕೆ ಹೋಗೋಣವೆಂದುಕೊಂಡಿದ್ದೇನೆ ನನ್ನ ಗಡ್ಡ ಯಾಕೋ ಸರಿಯಾಗಿ ಬೆಳೆಯುತ್ತಿಲ್ಲ. ಬಹುಶಃ ನಿಶ್ಶಕ್ತಿಯಿರಬೇಕು ಅದಕ್ಕೋಸ್ಕರ ನಾನು ಹೋಗುವ ಕಡೆಗೆ ನೀವೂ ಬನ್ನಿ ಆಪ್ತರಾದ ಸ್ನೇಹಿತರ ಹಾಗೆ ಇಬ್ಬರೂ ಹೋಗೋಣ'' ಎಂದಿತು.

ಕಡೆಗೆ ಅವರಿಬ್ಬರೂ ಪ್ರವಾಸ ಹೊರಟರು ಈಗ ನೆರಳು ಯಜಮಾನನಾಗಿತ್ತು, ಯಜಮಾನ ನೆರಳಾದ. ಇಬ್ಬರೂ ಒಟ್ಟಿಗೆ ಗಾಡಿಯಲ್ಲಿ ಹೋಗುವರು, ಇಬ್ಬರೂ ಒಟ್ಟಿಗೆ ಕುದುರೆ ಸವಾರಿ ಮಾಡುವರು, ಒಟ್ಟಿಗೆ ಪಕ್ಕಪಕ್ಕದಲ್ಲೆ ನಡೆದಾಡುವರು, ಅಥವಾ ಸೂರ್ಯನ ಸ್ಥಾನವನ್ನು ನೋಡಿಕೊಂಡು ಒಬ್ಬರ ಹಿಂದೆ ಒಬ್ಬರು ಹೋಗುವರು ಮರ್ಯಾದೆಯ ಸ್ಥಾನವನ್ನು ಯಾವಾಗ ಎಲ್ಲಿ ಆಕ್ರಮಿಸಬೇಕು ಎಂಬುದನ್ನು ನೆರಳು ಚೆನ್ನಾಗಿ ತಿಳಿದುಕೊಂಡಿತ್ತು ಆದರೆ ಪಂಡಿತನಿಗೆ ಅದರ ಕಡೆ ಲಕ್ಷ್ಯವೇ ಇರಲಿಲ್ಲ. ಅವನ ಮನಸ್ಸು ಒಳ್ಳೆಯದು, ಅವನ ಹೃದಯ ಮೃದು, ಅವನು ತುಂಬ ಸ್ನೇಹಪರ.

ಒಂದು ದಿನ ಯಜಮಾನ ನೆರಳನ್ನು ಕುರಿತು "ನಾವಿಬ್ಬರೂ ಬಾಲ್ಯದಿಂದ ಒಟ್ಟಿಗೆ ಬೆಳೆದಿದ್ದೇವೆ ಈಗ ಒಟ್ಟಿಗೇ ಪ್ರಯಾಣ ಹೊರಟಿದ್ದೇವೆ. ಇನ್ನು ಮುಂದೆ ನಾವು ಒಬ್ಬರನ್ನೊಬ್ಬರು ನೀನು ತಾನು ಎಂದು ಏಕವಚನದಲ್ಲಿ ಸಲಿಗೆಯಿಂದ ಕರೆಯಬಹುದಲ್ಲವೆ?" ಎಂದ.

ಅದಕ್ಕೆ ಆ ನೆರಳು–ಅದೇ ಈಗ ನಿಜವಾಗಿ ಯಜಮಾನನಲ್ಲವೆ—ಹೇಳಿತು: "ನೀವು ಮನಸ್ಸಿನಲ್ಲಿ ಏನೂ ಮುಚ್ಚಿಡದೆ ಸ್ಪಷ್ಟವಾಗಿ ಮಾತನಾಡಿದ್ದು ನನಗೆ ತುಂಬ ಸಂತೋಷ. ನಾನೂ ಅಷ್ಟೇ ಸ್ಪಷ್ಟವಾಗಿ ಹೇಳುತ್ತೇನೆ, ಕೇಳಿ. ನೀವು ತಿಳಿದವರು, ಪಂಡಿತರು; ನಿಮಗೆ ಲೋಕದ ಸ್ವಭಾವ ಗೊತ್ತು.

ಕೆಲವರಿಗೆ ಕಾಗದ ಸುಟ್ಟ ವಾಸನೆ ಎಂದರೆ ವಾಂತಿಯಾಗುತ್ತದೆ. ಕೆಲವರಿಗೆ ಗೋಡೆಯ ಮೇಲೆ ಉಗುರು ಗೀಚಿದರೆ ಮೈ ಜುಮ್ಮೆನ್ನುತ್ತದೆ. ಅದರ ಹಾಗೆಯೇ ಯಾರಾದರೂ ನನ್ನನ್ನು 'ನೀನು' ಎಂದು ಏಕವಚನದಲ್ಲಿ ಮಾತನಾಡಿಸಿದರೆ ಏನೋ ಒಂದು ತರವಾಗುತ್ತದೆ. ಹಿಂದೆ ನಾನು ನಿಮ್ಮ ನೆರಳಾಗಿದ್ದಾಗ ಹೇಗೋ ಹಾಗೆ ಕಾಲ ಕೆಳಗಿನ ಕಸದ ಹಾಗಾಗಿಬಿಡುತ್ತೇನೆ. ಇದನ್ನು ಜಂಬವೆಂದು ತಿಳಿಯಬಾರದು. ಅದು ಏನೋ ಮನಸ್ಸಿಗೆ ಹಾಗಾಗಿ ಬಿಡುತ್ತದೆ. ಆದ್ದರಿಂದ ನೀವು ನನ್ನನ್ನು ಏಕವಚನದಲ್ಲಿ ಮಾತನಾಡಿಸ ಬಾರದು. ಆದರೆ ನಾನು ನಿಮ್ಮನ್ನು ಏಕವಚನದಲ್ಲಿ ಮಾತನಾಡಿಸುವುದಕ್ಕೆ ನನ್ನದೇನೂ ಆಕ್ಷೇಪಣೆಯಿಲ್ಲ. ಎಂದ ಮೇಲೆ ನಿಮ್ಮ ಮನಸ್ಸಿನ ಬಯಕೆ ಅರ್ಥ ಪೂರ್ಣವಾದ ಹಾಗಾಯಿತಲ್ಲವೆ?" ಎಂದು ಆ ನೆರಳು ತನ್ನ ಹಿಂದಿನ ಯಜಮಾನನನ್ನು 'ನೀನು, ತಾನು' ಎಂದು ಕರೆಯಲು ತೊಡಗಿತು.

"ಇದು ಏಕೋ ಅತಿಯಾಗಿಹೋಯಿತಲ್ಲ! ನಾನು ಇದನ್ನು ಬಹು ವಚನದಲ್ಲಿ ಮಾತನಾಡಿಸಬೇಕಂತೆ, ಇದು ನನ್ನನ್ನು ಏಕವಚನದಲ್ಲಿ ಮಾತ ನಾಡಿಸುವುದಂತೆ! ಏನಿದು ಹುಡುಗಾಟ!" ಎಂದು ಪಂಡಿತ ಮನಸ್ಸಿನಲ್ಲೇ ಎಂದುಕೊಂಡ. ಆದರೆ ಏನು ಮಾಡುವುದು? ನೆರಳಿನ ಮಾತಿಗೆ ಒಪ್ಪಿ ಕೊಂಡ.

ಹೀಗೇ ಆ ಪಂಡಿತನೂ ನೆರಳೂ ತಿರುಗಾಡುತ್ತ ಒಂದು ಪ್ರಸಿದ್ಧವಾದ ತೀರ್ಥಕ್ಷೇತ್ರಕ್ಕೆ ಬಂದರು. ಅಲ್ಲಿ ಅನೇಕ ಜನ ಅಪರಿಚಿತರಿದ್ದರು. ಅವರಲ್ಲಿ ಒಬ್ಬಳು ಸುಂದರಿಯಾದ ರಾಜಪುತ್ರಿ. ಅವಳ ಕಣ್ಣಿನ ದೃಷ್ಟಿ ಬಹಳ ಸೂಕ್ಷ್ಮ ವಾಗಿತ್ತಂತೆ, ಆದ್ದರಿಂದ ಯಾರಿಗೂ ಗೋಚರವಾಗದ ಅನೇಕ ವಿಷಯಗಳು ಅವಳ ಕಣ್ಣಿಗೆ ಬೀಳುತ್ತಿದ್ದುವಂತೆ. ಇದನ್ನು ಅನೇಕರು ಒಂದು ರೋಗ ಎಂದು ಎಣಿಸಿದ್ದರು. ಆ ಕ್ಷೇತ್ರದ ತೀರ್ಥದಲ್ಲಿ ದಿನವೂ ಕಣ್ಣು ತೊಳೆದರೆ ಆ ರೋಗ ವಾಸಿಯಾಗುವುದೆಂದು ಅವಳು ಅಲ್ಲಿಗೆ ಬಂದಿದ್ದಳು. ಅವಳು ಪಂಡಿತನ ನೆರಳನ್ನು ನೋಡಿ, 'ಈ ಹೊಸಬ ಮಿಕ್ಕವರ ಹಾಗಿಲ್ಲ. ಇವನು ತನ್ನ ಗಡ್ಡವನ್ನು ಬೆಳೆಸುವುದಕ್ಕೋಸ್ಕರ ಈ ಕ್ಷೇತ್ರಕ್ಕೆ ಬಂದಿದ್ದಾನೆ ಎಂದು ಹೇಳುತ್ತಾರೆ. ಆದರೆ ಅದು ನಿಜವಾದ ಕಾರಣವಲ್ಲ. ಇವನಿಗೆ ಏನು ರೋಗ

ಎಂದು ನಾನು ಬಲ್ಲೆ. ಈ ಹೊಸಬನಿಗೆ ನೆರಳೇ ಇಲ್ಲ' ಎಂದುಕೊಂಡಳು. ದೊಡ್ಡ ರಾಜಕುಮಾರಿಯಾದುದರಿಂದ ಏನೂ ಸಂಕೋಚವಿಲ್ಲದೆ ಆ ನೆರಳಿನ ಹತ್ತಿರ ಹೋಗಿ, "ನೀವು ನಿಂತರೆ ನೆಲದ ಮೇಲೆ ನೆರಳೇ ಬೀಳುವುದಿಲ್ಲ ವಲ್ಲವೆ?'' ಎಂದಳು.

ಅದಕ್ಕೆ ನೆರಳು "ರಾಜಕುಮಾರಿ! ನಿಮ್ಮ ಕಣ್ಣಿನ ಕಾಯಿಲೆ ವಾಸಿ ಯಾದಹಾಗಿದೆ. ಬಹಳ ಸೂಕ್ಷ್ಮವಾಗಿದ್ದ ನಿಮ್ಮ ದೃಷ್ಟಿ ಈಗ ಸರಿಯಾಗಿದೆ. ಅದಕ್ಕೇ ನನ್ನ ನೆರಳು ನಿಮಗೆ ಕಾಣಿಸಲಿಲ್ಲ. ನನ್ನ ನೆರಳು ಮಿಕ್ಕ ನೆರಳು. ಗಳ ಹಾಗಲ್ಲ. ನನ್ನ ಜೊತೆಯಲ್ಲಿಯೇ ಒಬ್ಬ ಸದಾ ತಿರುಗಾಡುವುದನ್ನು ನೀವು ನೋಡಿಲ್ಲವೆ? ಕೆಲವರು ತಮ್ಮ ಸೇವಕರಿಗೆ ತಾವು ಉಪಯೋಗಿಸು ವದಕ್ಕಿಂತ ಉತ್ತಮವಾದ ವೇಷವಸ್ತ್ರಗಳನ್ನು ಒದಗಿಸುತ್ತಾರೆ. ಹಾಗೆಯೇ ನಾನು ಕೂಡ ನನ್ನ ನೆರಳಿಗೆ ಮನುಷ್ಯನಂತೆ ವೇಷ ಹಾಕಿದ್ದೇನೆ. ನೀವು ಹಾಗೇ ನೋಡಿದರೆ, ಆ ನನ್ನ ನೆರಳಿಗೆ ಕೂಡ ಒಂದು ನೆರಳು ಇರುವುದು ಕಂಡುಬರುತ್ತದೆ. ಇದಕ್ಕೆಲ್ಲಾ ಹಣ ನೀರು ಸುರಿದ ಹಾಗೆ ಸುರಿಯಬೇಕಾಗು ತ್ತದೆ. ಆದರೆ ನಾನು ಅದಕ್ಕೆಲ್ಲ ಹಿಂದುಮುಂದು ನೋಡುವುದಿಲ್ಲ'' ಎಂದಿತು.

"ಹಾಗಾದರೆ, ಈ ಕ್ಷೇತ್ರದ ನೀರಿನಲ್ಲಿ ನನ್ನ ಕಣ್ಣಿನ ದೋಷ ಗುಣ ವಾಯಿತೇನು? ಗುಣವಾಗಿರಬೇಕು. ಆದರೂ ಈಗಲೇ ಇಲ್ಲಿಂದ ಹೊರಟು ಹೋಗಬಾರದು. ಈ ಅಪರಿಚಿತನು ಯಾರೋ ರಾಜಕುಮಾರನಾಗಿರಬೇಕು. ಇವನು ಆಡುವ ಮಾತು ಕೇಳುವುದಕ್ಕೆ ಹಿತವಾಗಿದೆ. ದೇವರೆ, ಇವನ ಗಡ್ಡ ಬೇಗ ಬೆಳೆಯದಿರಲಿ! ಇಲ್ಲಿಂದ ಬೇಗ ಹೊರಟುಹೋಗದಿರಲಿ!" ಎಂದು ಆ ರಾಜಕುಮಾರಿ ತನ್ನ ಮನಸ್ಸಿನಲ್ಲಿ ತಾನೇ ಹೇಳಿಕೊಂಡಳು.

ಸಾಯಂಕಾಲ ರಾಜಕುಮಾರಿಯೂ ಆ ನೆರಳೂ ಒಟ್ಟಿಗೆ ನರ್ತನಮಾಡಿ ದರು. ಅವಳಂತೂ ಹೂವಿನ ಹಾಗೆ ಹಗುರವಾಗಿದ್ದಳು, ನೆರಳಂತೂ ಅವಳಿ ಗಿಂತ ಹಗುರವಾಗಿತ್ತು. ಅಷ್ಟು ಅನಾಯಾಸವಾಗಿ ನರ್ತನಮಾಡುವವರನ್ನು ರಾಜಕುಮಾರಿ ಅದುವರೆಗೂ ಕಂಡಿರಲಿಲ್ಲ ಅದರೊಡನೆ ಮಾತನಾಡುತ್ತ, ತಾನು ಯಾವ ದೇಶದಿಂದ ಬಂದೆನೆಂಬುದನ್ನು ಹೇಳಿಕೊಂಡಳು. ಆ ದೇಶ

ಅವನಿಗೆ ಗೊತ್ತಂತೆ, ಅವನು ಅಲ್ಲಿಗೆ ಹೋಗಿದ್ದನಂತೆ, ಆದರೆ ಆ ಕಾಲದಲ್ಲಿ ಅವಳು ಊರಲ್ಲಿ ಇರಲಿಲ್ಲವಂತೆ. ಅವನು ಅವಳ ತಂದೆಯ ಅರಮನೆಯ ಒಳಭಾಗವನ್ನು ಕಿಟಕಿಗಳ ಮೂಲಕ ನೋಡಿದ್ದ, ಒಳಗಿನ ರಹಸ್ಯಗಳನ್ನೆಲ್ಲಾ ತಿಳಿದಿದ್ದ. ಆದ್ದರಿಂದ ರಾಜಕುಮಾರಿ ತನ್ನ ದೇಶವನ್ನೂ ಮನೆಯನ್ನೂ ಕುರಿತು ಆಡಿದ ಮಾತಿಗೆಲ್ಲ ಅವನು ಸರಿಯಾದ ಉತ್ತರ ಕೊಡುತ್ತಿದ್ದ. ಅವನ ಅಪಾರವಾದ ತಿಳಿವಳಿಕೆಯನ್ನು ಕಂಡು ರಾಜಕುಮಾರಿಗೆ ಆಶ್ಚರ್ಯವಾಯಿತು ಅವನಷ್ಟು ನಿಪುಣನಾದವನು ಪ್ರಪಂಚದಲ್ಲೇ ಇಲ್ಲವೆಂದು ಅವಳಿಗೆನ್ನಿಸಿತು. ಅವನ ಜ್ಞಾನವನ್ನು ನೋಡಿ ಅವಳಿಗೆ ಅವನಲ್ಲಿ ಗೌರವ ಹುಟ್ಟಿತು. ಎರಡನೆಯ ಸಲ ಅವನೊಡನೆ ನರ್ತನ ಮಾಡುವಾಗ ಅವಳು ಅವನನ್ನು ಪ್ರೀತಿಸತೊಡಗಿದಳು. ರಾಜಕುಮಾರಿ ತನ್ನನ್ನು ಪ್ರೀತಿಸುವಳೆಂಬುದು ನೆರಳಿಗೂ ತಿಳಿಯಿತು. ಅವರು ಪುನಃ ಪುನಃ ನರ್ತನಮಾಡಿದರು. ರಾಜಕುಮಾರಿಯ ಪ್ರೇಮ ಇನ್ನೂ ಹೆಚ್ಚಿತು. ಆದರೂ ಅವಳು ತನ್ನ ವಿವೇಕವನ್ನು ಕಳೆದುಕೊಳ್ಳಲಿಲ್ಲ 'ನಾನು ದೊಡ್ಡದೇಶದ ರಾಜಕುಮಾರಿ. ಮುಂದೆ ಆ ದೇಶದ ಪ್ರಜೆಗಳನ್ನು ನಾನು ಆಳಬೇಕು. ನನ್ನನ್ನು ಮದುವೆಯಾಗುವವನು ರಾಜನಾಗಲು ಯೋಗ್ಯನಾಗಿರಬೇಕು. ಇವನೇನೋ ಜಾಣ, ನಿಜ. ಚೆನ್ನಾಗಿ ನರ್ತನಮಾಡುತ್ತಾನೆ, ನಿಜ. ಆದರೆ ಇವನು ಎಲ್ಲಾ ವಿಷಯಗಳಲ್ಲಿಯೂ ಸಂಪೂರ್ಣವಾದ ಜ್ಞಾನವನ್ನು ಪಡೆದಿರುವನೆ? ಮುಖ್ಯವಾಗಿ ಅದನ್ನು ಪರೀಕ್ಷೆಮಾಡಿ ನೋಡಬೇಕು" ಎಂದುಕೊಂಡು ಆ ರಾಜಕುಮಾರಿ ಅವನನ್ನು ಏನೋ ಒಂದು ಪ್ರಶ್ನೆ ಕೇಳಿದಳು. ಆ ಪ್ರಶ್ನೆ ಸುಲಭವಾಗಿರಲಿಲ್ಲ. ಅದಕ್ಕೆ ಏನು ಉತ್ತರ ಎಂದು ಅವಳಿಗೇ ಗೊತ್ತಿರಲಿಲ್ಲ. ನೆರಳಿಗಂತೂ ಪ್ರಶ್ನೆಯೇ ಅರ್ಥವಾಗಲಿಲ್ಲ. ಏನೂ ತೋಚದೆ ನೆರಳು ಮುಖ ಸೊಟ್ಟುಮಾಡಿಕೊಂಡಿತು.

ಅದಕ್ಕೆ ರಾಜಕುಮಾರಿ "ನಿನಗೆ ಇದರ ಉತ್ತರ ಗೊತ್ತಿಲ್ಲ" ಎಂದಳು.

ನೆರಳು ಆ ವೇಳೆಗೆ ಚೇತರಿಸಿಕೊಂಡು, "ಇದರ ವಿಷಯವಾಗಿ ನನ್ನ ಚಿಕ್ಕಂದಿನಲ್ಲಿ ಸ್ವಲ್ಪ ಕಲಿತಿದ್ದೇನೆ. ಇದಕ್ಕೆ ಉತ್ತರ ಹೇಳಲು ನಾನು ಏಕೆ,

ಅದೋ ಅಲ್ಲಿ ಬಾಗಿಲ ಬಳಿ ನಿಂತಿರುವ ನನ್ನ ನೆರಳು ಬೇಕಾದರೂ ನಿನ್ನ ಪ್ರಶ್ನೆಗೆ ಉತ್ತರ ಕೊಡಬಲ್ಲುದು" ಎಂದು ಪಂಡಿತನ ಕಡೆ ಕೈ ತೋರಿಸಿತು.

ರಾಜಕುಮಾರಿ "ನಿನ್ನ ನೆರಳೆ! ನಿನ್ನ ನೆರಳು ನನ್ನ ಪ್ರಶ್ನೆಗೆ ಉತ್ತರ ಹೇಳಬಲ್ಲುದೆ?" ಎಂದು ಆಶ್ಚರ್ಯದಿಂದ ಕೇಳಿದಳು.

"ಎಂದರೆ, ನನ್ನ ನೆರಳಿಗೆ ಈ ಉತ್ತರ ಖಂಡಿತವಾಗಿ ಗೊತ್ತಿದೆಯೆಂದು ನಾನು ಹೇಳಲಾರೆ. ಆದರೆ ಅದಕ್ಕೆ ಗೊತ್ತಿರಬಹುದು ಎಂದು ನನ್ನ ದೃಢವಾದ ನಂಬಿಕೆ ಅದೂ ಎಷ್ಟೋ ವರುಷಗಳಿಂದ ನನ್ನ ಹಿಂದೆ ಓಡಿಯಾಡಿದೆ, ನನ್ನ ಮಾತುಕತೆಗಳನ್ನೆಲ್ಲ ಕಿವಿಗೊಟ್ಟು ಕೇಳಿದೆ ಆದ್ದರಿಂದ ಅದಕ್ಕೆ ತಿಳಿದಿರುವುದು ಸಾಧ್ಯ. ಆದರೆ, ರಾಜಕುಮಾರಿ, ಗಮನಿಸಬೇಕಾದ ಒಂದು ವಿಷಯ ಉಂಟು. ಆ ನೆರಳು ತಾನೂ ಒಬ್ಬ ಮನುಷ್ಯ ಎಂದು ಅಭಿಮಾನಪಡುತ್ತಿದೆ ಆದ್ದರಿಂದ, ನಿನ್ನ ಪ್ರಶ್ನೆಗೆ ಅದು ಉತ್ತರ ಹೇಳಬೇಕಾದರೆ, ಅದಕ್ಕೆ ಅವಮಾನವಾಗದ ಹಾಗೆ ಅದನ್ನು ಮನುಷ್ಯನೆಂದೇ ಭಾವಿಸಿ ಮಾತನಾಡಿಸಬೇಕು" ಎಂದು ನೆರಳು ಹೇಳಿತು.

"ಅಯ್ಯೋ, ಅದಕ್ಕೇನು? ಸಂತೋಷದಿಂದ ಹಾಗೆಯೇ ಮಾತನಾಡಿಸೋಣ" ಎಂದು ಹೇಳಿ, ರಾಜಕುಮಾರಿ ದೂರದ ಬಾಗಿಲ ಬಳಿ ನಿಂತಿದ್ದ ಪಂಡಿತನ ಹತ್ತಿರ ಹೋಗಿ, ಸೂರ್ಯ, ಚಂದ್ರ, ಅರಣ್ಯ, ಪರ್ವತ, ದೇಶ, ವಿದೇಶ ಮುಂತಾದ ಹಲವಾರು ವಿಷಯಗಳನ್ನು ಪ್ರಸ್ತಾಪಿಸಿದಳು ಪಂಡಿತನು ಆಡಿದ ಮಾತುಕತೆ ಹಿತವಾಗಿತ್ತು, ತಿಳಿವಳಿಕೆಯಿಂದ ತುಂಬಿತ್ತು

"ಇವನ ನೆರಳೇ ಇಷ್ಟು ನಿಪುಣವಾಗಿದ್ದರೆ ಇವನ ನಿಪುಣತೆ ಎಷ್ಟಿರಬೇಕು! ಇವನನ್ನು ನಾನು ಮದುವೆ ಮಾಡಿಕೊಂಡರೆ ನನಗೂ ನನ್ನ ಪ್ರಜೆಗಳಿಗೂ ದೊಡ್ಡ ಭಾಗ್ಯ ಬಂದ ಹಾಗೆ. ಒಳ್ಳೆಯದು, ಇವನನ್ನು ನಾನು ವರಿಸುತ್ತೇನೆ" ಎಂದು ರಾಜಪುತ್ರಿ ತನಗೆ ತಾನೇ ಹೇಳಿಕೊಂಡಳು. ರಾಜಪುತ್ರಿಯೂ ನೆರಳೂ ಒಬ್ಬರನ್ನೊಬ್ಬರು ಮದುವೆಯಾಗಲು ಮಾತುಕೊಟ್ಟು ಒಪ್ಪಿಕೊಂಡರು. ಆದರೆ, ತಾನು ತನ್ನ ರಾಜ್ಯಕ್ಕೆ ಹೋಗಿ ಸೇರುವವರೆಗೂ ಆ ಗುಟ್ಟನ್ನು ಯಾರಿಗೂ ತಿಳಿಸಬಾರದೆಂದು ರಾಜಪುತ್ರಿ ನೆರಳನ್ನು ಕೇಳಿಕೊಂಡಳು.

"ಖಂಡಿತವಾಗಿ ಈ ಗುಟ್ಟು ಯಾರಿಗೂ ತಿಳಿಯದಂತೆ ನಾನು ನೋಡಿಕೊಳ್ಳುತ್ತೇನೆ. ನನ್ನ ನೆರಳಿಗೆ ಕೂಡ ಇದನ್ನು ತಿಳಿಸುವುದಿಲ್ಲ'' ಎಂದು ನೆರಳು ಹೇಳಿತು. ಅದು ಹಾಗೆ ಹೇಳುವುದಕ್ಕೆ ಕಾರಣವಿದ್ದೇ ಇತ್ತು.

ಸ್ವಲ್ಪ ದಿವಸಗಳಾದ ಮೇಲೆ ರಾಜಕುಮಾರಿ ತನ್ನ ದೇಶಕ್ಕೆ ಹಿಂದಿರುಗಿದಳು. ನೆರಳೂ ಅವಳ ಜೊತೆಯಲ್ಲೇ ಹೋಯಿತು.

ಒಂದು ದಿನ ನೆರಳು ಪಂಡಿತನನ್ನು ಕುರಿತು "ಅಯ್ಯ, ನಾನು ನಿಜವಾಗಿ ಅದೃಷ್ಟಶಾಲಿ. ನನಗೆ ಈಗ ತುಂಬ ಶಕ್ತಿ ಬಂದಿದೆ. ಆದ್ದರಿಂದ ನಿನಗೆ ಏನಾದರೂ ಉಪಕಾರಮಾಡಬೇಕೆಂದು ನನ್ನ ಇಷ್ಟ. ನೀನು ನನ್ನ ಅರಮನೆಯಲ್ಲಿಯೇ ಇರು ನನ್ನ ರಾಜರಥದಲ್ಲಿಯೇ ನೀನೂ ತಿರುಗಾಡು. ನಿನಗೆ ವರುಷಕ್ಕೆ ಹತ್ತುಸಾವಿರ ಹೊನ್ನು ಕೊಡುತ್ತೇನೆ. ಆದರೆ ಮಾತ್ರ, ನಿನ್ನನ್ನು ಎಲ್ಲರೂ 'ನೆರಳು' ಎಂದು ಕರೆಯುವುದಕ್ಕೆ ನೀನು ಸಮ್ಮತಿಸಬೇಕು ಮತ್ತು ನೀನು ಮನುಷ್ಯನಾಗಿದ್ದೆಯೆಂದು ಯಾರಿಗೂ ಹೇಳಕೊಳ್ಳಬಾರದು ವರುಷಕ್ಕೊಂದು ಸಲ, ನಾನು ಬಿಸಿಲು ಕಾಯಿಸಿಕೊಳ್ಳುತ್ತ ಕಿಟಕಿಯ ಮುಖಶಾಲೆಯಲ್ಲಿ ಕುಳಿತಾಗ, ನೀನು ನೆರಳಿನ ಹಾಗೆ ನನ್ನ ಕಾಲ ಹತ್ತಿರ ಮಲಗಿಕೊಳ್ಳಬೇಕು. ನಾನು ಈ ದಿನ ಸಂಜೆ ರಾಜಕುಮಾರಿಯನ್ನು ಮದುವೆ ಮಾಡಿಕೊಳ್ಳುವೆನಾದ್ದರಿಂದ, ನಾನು ಹೇಳಿದ ಹಾಗೆ ನೀನು ಕೇಳಿದರೆ ನಿನಗೆ ಕ್ಷೇಮ" ಎಂದಿತು.

ಅದಕ್ಕೆ ಪಂಡಿತನು "ಛೆ! ಏನು ಹುಚ್ಚು ಮಾತು ಇದು! ಈ ಹುಚ್ಚುತನಕ್ಕೆ ನಾನು ಒಪ್ಪಲಾರೆ, ಎಂದಿಗೂ ಒಪ್ಪುವೊಲ್ಲೆ. ಇಡೀ ದೇಶಕ್ಕೂ ರಾಜಕುಮಾರಿಗೂ ನೀನು ಹೀಗೆ ಮೋಸಮಾಡುವುದುಂಟೆ? ನಾನು ಎಲ್ಲವನ್ನೂ ಹೇಳಿಬಿಡುತ್ತೇನೆ. ನಾನು ಮನುಷ್ಯ, ನೀನು ನನ್ನ ನೆರಳು, ಮನುಷ್ಯನ ಬಟ್ಟೆಗಳನ್ನು ಧರಿಸಿಕೊಂಡ ನೆರಳು ಎಂದು ತಿಳಿಸಿಬಿಡುತ್ತೇನೆ" ಎಂದ.

"ನೀನು ಹೇಳಿದರೆ, ನಿನ್ನ ಮಾತು ನಂಬುವವರು ಯಾರು? ನನ್ನ ಮಾತಿನಂತೆ ನಡೆಯುವೆಯೋ, ಅಥವಾ ಪಹರೆಯ ಸೈನಿಕರನ್ನು ಕರೆಯಲೊ?" ಎಂದಿತು ನೆರಳು.

"ನಾನು ರಾಜಕುಮಾರಿಯ ಹತ್ತಿರಕ್ಕೇ ನೇರವಾಗಿ ಹೋಗುತ್ತೇನೆ" ಎಂದು ಪಂಡಿತನು ಹೊರಟ

"ರಾಜಕುಮಾರಿಯ ಹತ್ತಿರಕ್ಕೆ ನಿನಗಿಂತ ಮೊದಲು ನಾನೇ ಹೋಗುತ್ತೇನೆ. ನೀನು ಸೆರೆಮನೆಗೆ ಹೋಗುವೆಯಂತೆ" ಎಂದು ನೆರಳು ಹೇಳಿತು. ಹಾಗೇ ಆಯಿತು. ನೆರಳಿನ ಮಾತಿನಂತೆ ಸೈನಿಕರು ಪಂಡಿತನನ್ನು ಸೆರೆಹಿಡಿದುಕೊಂಡೊಯ್ದರು. ನೆರಳು ರಾಜಕುಮಾರಿಯನ್ನು ಮದುವೆಯಾಗುವುದೆಂಬ ವಿಷಯ ಅವರಿಗೆಲ್ಲ ತಿಳಿದಿತ್ತು.

ನೆರಳು ರಾಜಕುಮಾರಿಯ ಹತ್ತಿರ ಬಂದಾಗ, "ಇದೇಕೆ ನಿನ್ನ ಮೈಕೈಯೆಲ್ಲ ನಡುಗುತ್ತಿದೆ? ಏನಾಯಿತು? ಮೈಯಲ್ಲಿ ಆರೋಗ್ಯವಿಲ್ಲವೇನು? ಈ ಹೊತ್ತು ಸಂಜೆ ನಮ್ಮ ಮದುವೆಯಿದೆಯಲ್ಲ!" ಎಂದು ರಾಜಕುಮಾರಿ ಪೇಚಾಡಿದಳು.

ಅದಕ್ಕೆ ನೆರಳು "ಛಿ ಛಿ! ಏನು ಭಯಂಕರವಾದ ವರ್ತನೆ! ನನ್ನ ನೆರಳಿರಲಿಲ್ಲವೆ, ಪಾಪ, ಅದಕ್ಕೆ ಹುಚ್ಚು ಹಿಡಿದುಬಿಟ್ಟಿದೆ. ಆ ಸಣ್ಣ ಬುರುಡೆಯಲ್ಲಿ ಅಷ್ಟು ಜ್ಞಾನ ತುಂಬಬಾರದಾಗಿತ್ತು ತಾನು ಒಬ್ಬ ಮನುಷ್ಯ, ನಾನು ಅದರ ನೆರಳು ಎಂದು ಏನೇನೋ ಹರಟುತ್ತಿದೆ, ಪಾಪ!" ಎಂದಿತು.

"ಅಯ್ಯೋ! ಅಯ್ಯೋ! ಎಂಥ ಭಯಂಕರವಾದ ಹುಚ್ಚು! ಅದನ್ನು ಸೆರೆಯಲ್ಲಿ ಇಡಿಸಬಹುದಲ್ಲ!" ಎಂದಳು ರಾಜಕುಮಾರಿ.

"ಅದರ ಹುಚ್ಚಿನಿಂದ ಏನೇನು ಅನಾಹುತಗಳಾಗಬಹುದೋ ಎಂದು ಹೆದರಿ ನಾನೇ ಅದನ್ನು ಸೆರೆಯಲ್ಲಿ ಇಡಿಸಿದೆ" ಎಂದಿತು ನೆರಳು.

ರಾಜಕುಮಾರಿ "ಅಯ್ಯೋ ಪಾಪ! ತುಂಬ ಅನ್ಯಾಯ! ಏನು ಜ್ಞಾನ, ಏನು ತಿಳಿವಳಿಕೆ, ಆ ನೆರಳಿಗೆ! ಇಂಥ ಹುಚ್ಚು ಹತ್ತಿದಾಗ ಸಾವು ಬಂದರೆ ಎಷ್ಟೋ ನೆಮ್ಮದಿ. ಸೇವಕರಾದವರು ತಮ್ಮ ಒಡೆಯರಿಗೆ ಎದುರಾಗಿ ಮಾತನಾಡುವ ಸ್ಥಿತಿ ಬಂದಾಗ ಅವರನ್ನು ಕೊನೆಗಾಣಿಸಿಬಿಡುವುದು ಒಳ್ಳೆಯ ನೀತಿ" ಎಂದಳು.

"ಅದು ನಿಜವೇ ಆದರೂ, ಪಾಪ, ಎಷ್ಟೋ ವರುಷಗಳಿಂದ ನನ್ನ ಸೇವೆ ಮಾಡಿಕೊಂಡಿತ್ತು ಆ ನೆರಳು'' ಎಂದು ನೆರಳು ದುಃಖದಿಂದ ನಿಟ್ಟುಸಿರು ಬಿಡುವಂತೆ ನಟಿಸಿತು.

"ನಿನ್ನಂತಹ ಮಹಾತ್ಮನಿಗೆ ತಕ್ಕ ಮಾತನ್ನೇ ನೀನು ಆಡಿದೆ" ಎಂದು ರಾಜಕುಮಾರಿ ಆ ನೆರಳಿಗೆ ಅಡ್ಡಬಿದ್ದು ನಮಸ್ಕಾರ ಮಾಡಿದಳು.

ಸಂಜೆ ಊರ ತುಂಬ ದೀಪಗಳ ಅಲಂಕಾರಮಾಡಿದ್ದರು. ಎಲ್ಲೆಲ್ಲಿ ನೋಡಿದರೂ ಬಾಣಬಿರುಸುಗಳನ್ನು ಹತ್ತಿಸುತ್ತಿದ್ದರು. ಮದುವೆ ಬಹು ವಿಜೃಂಭಣೆಯಿಂದ ನೆರವೇರಿತು. ರಾಜಕುಮಾರಿಯೂ ಅವಳ ಕೈಹಿಡಿದ ನೆರಳೂ ಅರಮನೆಯ ಮುಖಶಾಲೆಯಲ್ಲಿ ನಿಂತು ಪ್ರಜೆಗಳಿಗೆ ದರ್ಶನಕೊಟ್ಟರು. ಪ್ರಜೆಗಳೆಲ್ಲರೂ ಪುನಃ ಪುನಃ ಜಯಕಾರಮಾಡಿದರು. ಆದರೆ ಪಂಡಿತನಿಗೆ ಮಾತ್ರ ಆ ವೈಭವ ವಿಜೃಂಭಣೆ ಒಂದೂ ಗೊತ್ತಾಗಲಿಲ್ಲ. ಏಕೆಂದರೆ, ಆ ವೇಳೆಗಾಗಲೇ ಸೆರೆಮನೆಯಲ್ಲಿ ಅವನ ಕತ್ತನ್ನು ಕತ್ತರಿಸಿಬಿಟ್ಟಿದ್ದರು.

# ಚಿಕ್ಕ ಮೀನಕನ್ಯೆ

ದೂರ, ಸಮುದ್ರದ ಮಧ್ಯದಲ್ಲಿ, ನೀರು ನೀಲಮಣಿಯ ಹಾಗೆ ನೀಲಿಯಾಗಿ ತಿಳಿಯಾಗಿ ಇರುವ ಕಡೆಯಲ್ಲಿ ಆಳ ತುಂಬ ಆಳ; ಎಷ್ಟು ಹಗ್ಗ ಕಟ್ಟಿ ಬಿಟ್ಟರೂ ಅಡಿಯೇ ನಿಲುಕದಷ್ಟು ಆಳ; ದೇವಸ್ಥಾನದ ಗೋಪುರಗಳನ್ನು ಒಂದರ ಮೇಲೆ ಒಂದರಂತೆ ಎಷ್ಟು ನಿಲ್ಲಿಸಿದರೂ ಸಮುದ್ರದ ಅಡಿಯ ನೆಲದಿಂದ ಮೇಲಿನ ನೀರಿನವರೆಗೆ ಮುಟ್ಟುವುದು ಸಾಧ್ಯವೇ ಇಲ್ಲದಷ್ಟು ಆಳ. ಅಲ್ಲಿಯೇ ಸಮುದ್ರ ರಾಜನೂ ಅವನ ಪ್ರಜೆಗಳೂ ವಾಸವಾಗಿರುವುದು. ಅಲ್ಲಿ, ಆ ಸಮುದ್ರದ ಅಡಿಯಲ್ಲಿ ಹೊಂಬಣ್ಣದ ಮರಳು ಒಂದು ಹೊರತಾಗಿ ಬೇರೆ ಏನೂ ಇಲ್ಲವೆಂದು ಯಾರೂ ಎಣಿಸಬಾರದು. ಅಲ್ಲಿ ಅನೇಕ ವಿಚಿತ್ರ ರೀತಿಯ ಗಿಡಗಳೂ ಬಳ್ಳಿಗಳೂ ಬೆಳೆಯುತ್ತವೆ, ಹೂ ಬಿಡುತ್ತವೆ, ಅವುಗಳ ಕುಡಿಗಳೂ ಎಲೆಗಳೂ ಎಷ್ಟು ಬಾಗಿ ಬಳುಕುತ್ತವೆ ಎಂದರೆ, ನೀರು ಸ್ವಲ್ಪ ಚಲಿಸಿದರೂ ಸಾಕು, ತಮಗೆ ಜೀವವಿದೆಯೋ ಎಂಬಂತೆ ಮೈ ಒಲೆಯುತ್ತವೆ. ನೆಲದ ಮೇಲೆ ಮರಗಳ ನಡುವೆ ಹಕ್ಕಿಗಳು ಹಾರಾಡುವ ಹಾಗೆಯೇ ಅಲ್ಲಿ ನೀರಿನ ಕೆಳಗೆ ದೊಡ್ಡ ಮೀನುಗಳೂ ಸಣ್ಣ ಮೀನುಗಳೂ ಚಲಿಸುತ್ತಿರುತ್ತವೆ. ಇಂತಹ ಸಮುದ್ರದ ಅಡಿಯಲ್ಲಿ, ಅತಿ ಆಳವಾದ ಕಡೆಯಲ್ಲಿ ಸಮುದ್ರರಾಜನ ಅರಮನೆ ಇದೆ. ಅದರ ಗೋಡೆಗಳೆಲ್ಲ ಹವಳ, ಅಲ್ಲಿಯ ದೊಡ್ಡ ಕಿಟಕಿಗಳೆಲ್ಲ ಗೋಮೇಧಿಕ. ಮೇಲಿನ ಛಾವಣಿಗಳನ್ನು ಚಿಪ್ಪುಗಳಿಂದ ಮಾಡಿದ್ದಾರೆ. ನೀರು ಮೇಲೆ ಹರಿದ ಹಾಗೆಲ್ಲ ಆ ಚಿಪ್ಪುಗಳು ತೆರೆಯುತ್ತವೆ, ಮುಚ್ಚಿಕೊಳ್ಳುತ್ತವೆ. ಒಂದೊಂದು ಚಿಪ್ಪಿನಲ್ಲೂ ಒಂದೊಂದು ಮುತ್ತು, ರಾಣಿಯ ಕಿರೀಟವನ್ನು ಅಲಂಕರಿಸಲು ತಕ್ಕುದಾದ ಮುತ್ತು ಅದನ್ನು ನೋಡುವುದೇ ಕಣ್ಣಿಗೆ ಒಂದು ಹಬ್ಬ.

ಸಮುದ್ರರಾಜನ ಹೆಂಡತಿ ಬಹಳ ವರುಷಗಳ ಹಿಂದೆಯೇ ಸತ್ತು ಹೋಗಿದ್ದಳು. ಅವನ ಮುದಿತಾಯಿಯೇ ಮನೆಯ ಯಾಜಮಾನ್ಯ ನಡಸುತ್ತಿದ್ದಳು. ಆಕೆ ಬಹು ಬುದ್ಧಿಮತಿ. ತಾನು ದೊಡ್ಡ ವಂಶದಲ್ಲಿ ಹುಟ್ಟಿದೆನೆಂದು ಆಕೆಗೆ ತುಂಬ ಅಭಿಮಾನ. ಆದ್ದರಿಂದಲೇ ಅವಳು ತನ್ನ ಬಾಲದ ಮೇಲೆ

ಹನ್ನೆರಡು ಮುತ್ತಿನ ಚಿಪ್ಪುಗಳನ್ನು ಅಲಂಕಾರವಾಗಿ ಧರಿಸಿದ್ದಳು. ಉಳಿದವರು ಎಷ್ಟೇ ಉತ್ತಮ ಕುಲದಲ್ಲಿ ಹುಟ್ಟಿದ್ದರೂ ಆರಕ್ಕಿಂತ ಹೆಚ್ಚು ಮುತ್ತಿನ ಚಿಪ್ಪುಗಳನ್ನು ಧರಿಸುವಂತಿರಲಿಲ್ಲ. ಆಕೆ ತನ್ನ ಮೊಮ್ಮಕ್ಕಳಾದ ಆರು ಜನ ಸಮುದ್ರರಾಜಕನ್ಯೆಯರನ್ನು ಪಾಲಿಸುತ್ತಿದ್ದುದು ಕಂಡು ಎಲ್ಲರೂ ಅವಳನ್ನು ಹೊಗಳುತ್ತಿದ್ದರು. ಆ ಆರು ಮಕ್ಕಳೂ ಸುಂದರವಾಗಿದ್ದರೂ ಕಡೆಯವಳು ಮಾತ್ರ ಅವರೆಲ್ಲರಿಗಿಂತ ತುಂಬ ಚೆಲುವಾಗಿದ್ದಳು. ಅವಳ ಚರ್ಮ ಗುಲಾಬಿಯ ಎಲೆಯಂತೆ ಸ್ವಚ್ಛವಾಗಿ ಕೋಮಲವಾಗಿತ್ತು. ಅವಳ ಕಣ್ಣು ಆಳವಾದ ಸಮುದ್ರದ ಹಾಗೆ ನೀಲವಾಗಿತ್ತು. ಆದರೆ ಉಳಿದ ಇತರರ ಹಾಗೆಯೇ ಅವಳಿಗೆ ಕಾಲುಗಳಿರಲಿಲ್ಲ, ಅವಳ ದೇಹದ ಕೆಳಭಾಗ ಮೀನಿನ ಬಾಲವಾಗಿತ್ತು. ಅವರು ಬೆಳಗಿನಿಂದ ಸಂಜೆಯವರೆಗೂ ಅರಮನೆಯ ವಿಶಾಲವಾದ ಅಂಗಳಗಳಲ್ಲೋ ಅಥವಾ ಗೋಡೆಗಳ ಮೇಲೆ ಬೆಳೆದಿದ್ದ ಹೂಗಳ ನಡುವೆಯೋ ಆಟವಾಡುತ್ತಿರುವರು. ದೊಡ್ಡದಾದ ಆ ಗೋಮೇಧಿಕದ ಕಿಟಕಿಗಳನ್ನು ತೆರೆದಿದ್ದುದರಿಂದ, ನಮ್ಮ ಮನೆಗಳಲ್ಲಿ ಗುಬ್ಬಚ್ಚಿಗಳು ಓಡಿಯಾಡುವ ಹಾಗೆ, ಮೀನುಗಳು ಒಳಗೆ ಬಂದು ಓಡಿಯಾಡುತ್ತಿದ್ದುವು. ರಾಜಕುಮಾರಿಯರ ಹತ್ತಿರಕ್ಕೆ ಬಂದು, ಅವರ ಕೈಯಿಂದಲೇ ಆಹಾರವನ್ನು ತಿಂದು, ಅವರು ತಮ್ಮನ್ನು ಸವರಿದರೂ ಸುಮ್ಮನಿರುತ್ತಿದ್ದುವು. ಅರಮನೆಯ ಹೊರಗಡೆ ಒಂದು ಸುಂದರವಾದ ಉದ್ಯಾನವನವಿತ್ತು. ಅಲ್ಲಿ ರಕ್ತದಂತೆ ಕೆಂಪಾದ ಹೂಗಳೂ ಮೇಘದಂತೆ ಕಪ್ಪಾದ ಕುಸುಮಗಳೂ ಬೆಳೆದಿದ್ದುವು, ಅರಳಿದ ಪುಷ್ಪಗಳು ಬೆಂಕಿಯ ನಾಲಗೆಯಂತಿದ್ದುವು, ಹಣ್ಣು ಚಿನ್ನದ ಹಾಗೆ ಮಿರುಗುತ್ತಿತ್ತು; ಎಲೆಗಳೂ ಕುಡಿಗಳೂ ನಿರಂತರವಾಗಿ ತಲೆದೂಗುತ್ತಿದ್ದುವು. ನೆಲವಂತೂ ನುಣುಪಾದ ಮರಳೇ ಆಗಿದ್ದರೂ ಅದರ ಬಣ್ಣ ಉರಿಯುವ ಗಂಧಕದ ಜ್ವಾಲೆಯ ಹಾಗೆ ನೀಲಿ ಬಣ್ಣವಾಗಿತ್ತು. ಅಲ್ಲಿ ಇದ್ದ ಪ್ರತಿಯೊಂದರ ಮೇಲೆಯೂ ಅದೇನೋ ಒಂದು ವಿಧವಾದ ನೀಲಿಯ ಪ್ರಭೆ ಬಿದ್ದಿತ್ತು. ಸಮುದ್ರದ ಆಳದಲ್ಲಿ ಕತ್ತಲಾಗಿರುವ ಬದಲು ಮೇಲೆ ಕಾಣಿಸುತ್ತಿದ್ದ ನೀಲಾಕಾಶದಿಂದ ಬಣ್ಣ ಬಂದು ಕೆಳಗಿಳಿದ ಹಾಗಿತ್ತು. ಗಾಳಿ ಬೀಸದೆ ಶಾಂತವಾಗಿದ್ದಾಗ ಸೂರ್ಯನು ಕೆಂಬಣ್ಣದ ಹೂವಿನಂತೆ ಕಾಣಿಸುತ್ತಿದ್ದ. ಹೂವಿನ ಹೊಡೆಯಿಂದ ಬೆಳಕಿನ ಮಳೆ ಸುರಿಯುತ್ತಿತ್ತು.




ಮೀನಕನ್ಯೆಯರೂ ಮುದಿ ಅಜ್ಜಿಯೂ

# ಚಿಕ್ಕ ಮೀನಕನ್ಯೆ

ಕೇವಲ ಜಲಚರಗಳಾದ ಮೀನಕನ್ಯೆಯರಿಗೂ ಆತ್ಮದ ಹಂಬಲ ಉಂಟೆ?

ಈ ಕಥೆಯ ಪ್ರಕಾರ, ಉಂಟು.

ಅವರಿಗೂ ಆತ್ಮದ ಅಸ್ತಿತ್ವದಲ್ಲಿ ನಂಬಿಕೆ ಉಂಟೆ?

ಈ ಕಥೆಯ ಪ್ರಕಾರ, ಉಂಟು.

ಆತ್ಮವನ್ನು ಸಾಧಿಸಬೇಕಾದರೆ ಶ್ರಮವನ್ನು ಸಹಿಸಬೇಕು, ಯಾವ ತ್ಯಾಗಕ್ಕಾದರೂ ಸಿದ್ಧವಾಗಿರಬೇಕು, ಎಷ್ಟು ಕಾಲವಾದರೂ ಸಹನೆ ಇರಬೇಕು ಎಂಬುದು ಅವರಿಗೆ ಗೊತ್ತೆ?

ಈ ಕಥೆಯ ಪ್ರಕಾರ, ಗೊತ್ತು.

ಇಂತಹ ಹಂಬಲ, ಇಂತಹ ನಂಬಿಕೆ, ಇಂತಹ ಜ್ಞಾನ ಎಲ್ಲಾ ಮೀನಮಾನವರಿಗೂ ಮೀನಸ್ತ್ರೀಯರಿಗೂ ಉಂಟೆ?

ನಮಗೆ ತಿಳಿದಮಟ್ಟಿಗೆ ಇಂತಹ ಹಂಬಲ, ನಂಬಿಕೆ, ಜ್ಞಾನ ಇದ್ದುದು ಈ ಕತೆಯ ಚಿಕ್ಕ ಮೀನಕನ್ಯೆಯೊಬ್ಬಳಿಗೆ ಮಾತ್ರ.

ಇದು ಬಹಳ ಆಶ್ಚರ್ಯವಲ್ಲವೆ?

ನಿಜವಾದ ಮಾತು!

ಸಮುದ್ರರಾಜಕುಮಾರಿಯರಲ್ಲಿ ಪ್ರತಿಯೊಬ್ಬರೂ ಉದ್ಯಾನದ ಒಂದೊಂದು ಭಾಗದಲ್ಲಿ ತಮಗೆ ಬೇಕಾದಂತೆ ಅಗೆದು ತಮಗೆ ಇಷ್ಟವಾದ ಗಿಡ ಬೆಳಸುತ್ತಿದ್ದರು. ಒಬ್ಬಳು ತನ್ನ ಹೂಗಿಡಗಳ ಪಾತಿಯನ್ನು ತಿಮಿಂಗಿಲದ ಆಕಾರದಲ್ಲಿ ಬೆಳೆಸಿದ್ದಳು, ಇನ್ನೊಬ್ಬಳು ತನ್ನಂತೆಯೇ ಒಬ್ಬ ಮೀನಕನ್ಯೆಯ ಆಕಾರವನ್ನು ರಚಿಸಿದ್ದಳು, ಆದರೆ ಕಡೆಯವಳದು ಮಾತ್ರ ಸೂರ್ಯನ ಹಾಗಿತ್ತು, ಆ ಪಾತಿಯಲ್ಲಿದ್ದ ಹೂವುಗಳೆಲ್ಲ ಸಂಧ್ಯಾಸೂರ್ಯನ ಕಿರಣಗಳ ಹಾಗೆ ಕೆಂಪಗಿದ್ದುವು. ಆ ಆರು ಕನ್ಯೆಯರಲ್ಲಿ ಅವಳೇ ಒಂದು ವಿಚಿತ್ರ, ಸದ್ದಿಲ್ಲದೆ ಸದಾ ಯೋಚನಾಪರಳಾಗಿರುತ್ತಿದ್ದಳು. ತನ್ನ ಅಕ್ಕಂದಿರು ಸಮುದ್ರದ ನಡುವೆ ಒಡೆದುಹೋದ ಹಡಗುಗಳಿಂದ ಸಿಕ್ಕಿದ ವಸ್ತುಗಳನ್ನಿಟ್ಟು ಕೊಂಡು ಆಶ್ಚರ್ಯಪಡುತ್ತಿದ್ದರೆ, ಅವಳಿಗೆ ಮಾತ್ರ ತನ್ನ ಕೆಂಪು ಹೂಗಳನ್ನು ಬಿಟ್ಟು ಬೇರೆ ಏನೂ ಬೇಕಾಗುತ್ತಿರಲಿಲ್ಲ. ಆ ಕೆಂಪು ಹೂಗಳನ್ನು ಬಿಟ್ಟರೆ, ಅವಳಿಗೆ ಇಷ್ಟವಾದುದು ಒಂದು ಸುಂದರವಾದ ಬಿಳಿಶಿಲೆಯ ವಿಗ್ರಹ. ಅದು ಒಬ್ಬ ಸುಂದರವಾದ ಹುಡುಗನ ಮೂರ್ತಿ, ಸ್ವಚ್ಛವಾದ ಬಿಳಿಯ ಕಲ್ಲಿನಲ್ಲಿ ಕಡೆದುದು, ಎಂದೋ ಯಾವುದೋ ಹಡಗು ಮುರಿದಾಗ ಸಮುದ್ರದ ತಳಕ್ಕೆ ಬಿದ್ದುದು. ಅವಳು ಆ ವಿಗ್ರಹದ ಹತ್ತಿರ ಒಂದು ಗುಲಾಬಿಬಣ್ಣದ ಗಿಡವನ್ನು ನೆಟ್ಟಳು. ಅದು ಚೆನ್ನಾಗಿ ಬೆಳೆದು, ಬಹುಬೇಗ ಅದರ ಕೊಂಬೆಗಳು ತೂಗಾಡುವ ಎಲೆಗಳ ಭಾರದಿಂದ ಬಾಗಿ ಕೆಳಗಿನ ನೀಲಿಯ ಮರಳಿನವರೆಗೂ ತೊಂಗುತ್ತಿದ್ದುವು. ಅದರ ನೆರಳು ಊದಾಬಣ್ಣವಾಗಿ ಕೊಂಬೆ ಅಲುಗಿದ ಹಾಗೆಲ್ಲ ತಾನೂ ಅಲುಗಾಡುತ್ತಿತ್ತು, ನೋಡಿದರೆ, ಗಿಡದ ತುದಿಯೂ ಬುಡವೂ ಒಂದರೊಡನೊಂದು ಆಟವಾಡುತ್ತ ಒಂದನ್ನೊಂದು ಮುತ್ತಿಡುತ್ತಿರುವಂತೆ ಕಾಣುತ್ತಿತ್ತು.

ಸಮುದ್ರದ ಮೇಲಿನ ಪ್ರಪಂಚದ ಸುದ್ದಿಯನ್ನು ಕೇಳುವುದೆಂದರೆ ಅವಳಿಗೆ ಪರಮಸಂತೋಷ. ತನ್ನ ಅಜ್ಜಿಗೆ ತಿಳಿದಿದ್ದ ಹಡಗುಗಳು, ನಗರಗಳು, ಜನಗಳು, ಪ್ರಾಣಿಗಳು ಎಲ್ಲದರ ವಿಚಾರವನ್ನೂ ಅವಳಿಂದ ಹೇಳಿಸಿ ಕೇಳಿದಳು ನೀರಿನ ಕೆಳಗಿನ ಹೂಗಳಿಗೆ ವಾಸನೆಯೇ ಇಲ್ಲದಿರುವಾಗ ನೆಲದ ಮೇಲಿನ ಹೂಗಳಿಗೆ ತುಂಬಾ ವಾಸನೆಯುಂಟು ; ಕಾಡಿನಲ್ಲಿರುವ ಮರಗಳು ಹಚ್ಚಹಸುರಾಗಿವೆ, ಮರಗಳಲ್ಲಿ ಹಾರಾಡುವ ಮೀನುಗಳು ಕಿವಿಗೆ ಹಿತವಾಗು

ವಂತೆ ಇಂಪಾಗಿ ಹಾಡುತ್ತವೆ; ಮುಂತಾದ ಅನೇಕ ವಿಚಾರಗಳನ್ನು ತನ್ನ ಅಜ್ಜಿಯಿಂದ ಕೇಳಿ, ಕಡೆಯ ರಾಜಕುಮಾರಿ ಬಹಳ ಆಶ್ಚರ್ಯಪಡುತ್ತಿದ್ದಳು. ಅವಳ ಅಜ್ಜಿ ಹಕ್ಕಿಗಳನ್ನು ಮಿಾನುಗಳೆಂದು ಕರೆದಳು. ಇಲ್ಲದಿದ್ದರೆ ಹಕ್ಕಿಗಳನ್ನು ಎಂದೂ ನೋಡದ ರಾಜಕುಮಾರಿಗೆ ಅದು ಅರ್ಥವೇ ಆಗುತ್ತಿರಲಿಲ್ಲ.

"ನೋಡು, ಮಗು. ನಿನಗೆ ಹದಿನೈದು ವರುಷ ತುಂಬಿದಾಗ ನೀನು ಸಮುದ್ರದ ಮೇಲಿನವರೆಗೂ ಎದ್ದು ಹೋಗಬಹುದು, ಬಂಡೆಗಳ ಮೇಲೆ ಬೆಳುದಿಂಗಳಿನಲ್ಲಿ ಕುಳಿತುಕೊಳ್ಳಬಹುದು, ಬಂದುಹೋಗುವ ದೊಡ್ಡದೊಡ್ಡ ಹಡಗುಗಳನ್ನು ನೋಡಬಹುದು. ಆಗ ಕಾಡುಗಳನ್ನೂ ಪಟ್ಟಣಗಳನ್ನೂ ಕಣ್ಣುತುಂಬ ನೋಡುವೆಯಂತೆ" ಎಂದು ಅಜ್ಜಿ ಹೇಳಿದಳು.

ಮುಂದಿನ ವರ್ಷ ಅವಳ ಒಬ್ಬ ಅಕ್ಕನಿಗೆ ಹದಿನೈದು ತುಂಬುತ್ತಿತ್ತು. ಒಬ್ಬರಿಗಿಂತ ಒಬ್ಬರು ಒಂದೊಂದು ವರ್ಷ ಸಣ್ಣವರಾಗಿದ್ದುದರಿಂದ ಕಡೆಯವಳು ತಾನು ಸಮುದ್ರದಿಂದ ಮೇಲೆದ್ದು ಭೂಲೋಕವನ್ನು ನೋಡಲು ಇನ್ನೂ ಐದು ವರುಷ ಕಾಯಬೇಕಾಗಿತ್ತು. ಆದರೂ ಮೊದಲನೆಯವಳು ತಾನು ಮೇಲೆ ಹೋದಾಗ ಮೊದಲ ಬಾರಿಗೆ ಕಂಡುದನ್ನು ತನ್ನ ಐದು ಜನ ತಂಗಿಯರಿಗೂ ವಿಶದವಾಗಿ ವರ್ಣಿಸಬೇಕೆಂದು ಆ ಅಕ್ಕತಂಗಿಯರಲ್ಲಿ ಆಗಲೆ ಮಾತಾಗಿತ್ತು. ತಮ್ಮ ಅಜ್ಜಿ ಹೇಳಿದುದರಲ್ಲಿ ಅವರಿಗೆ ತೃಪ್ತಿಯಾಗಿರಲಿಲ್ಲ. ಆದರೂ ಸಮುದ್ರದಿಂದ ಮೇಲೆ ಎದ್ದುಹೋಗಬೇಕೆಂದು ಕೊನೆಯವಳು ಪಡುತ್ತಿದ್ದಷ್ಟು ಕಾತರ ಉಳಿದವರು ಯಾರಿಗೂ ಇರಲಿಲ್ಲ. ಅವಳು ತಾನೆ, ಒಂದಲ್ಲ, ಎರಡಲ್ಲ, ಐದು ವರ್ಷ ಕಾಯಬೇಕಾಗಿತ್ತು! ಅವಳು ಸದಾ ಮೇಲುಲೋಕವನ್ನೇ ಕುರಿತು ವಿಚಾರಮಾಡುತ್ತ ಮೌನವಾಗಿ ಕುಳಿತಿರುತ್ತಿದ್ದಳು. ಅನೇಕ ರಾತ್ರಿಗಳು ತಮ್ಮ ಅರಮನೆಯ ತೆರೆದ ಕಿಟಕಿಯ ಬಳಿ ನಿಂತು, ನೀಲಿಯ ನೀರಿನ ಮೂಲಕ ನೋಡುತ್ತ, ಮಿಾನುಗಳು ಬಾಲವಾಡಿಸುತ್ತ ಹೋಗಿ ಬರುವದನ್ನು ಗಮನಿಸುತ್ತಿದ್ದಳು. ಮೇಲೆ ನೋಡಿದರೆ ಚಂದ್ರನೂ ನಕ್ಷತ್ರಗಳೂ ಮಸಕುಮಸಕಾಗಿ ಹೊಳೆಯುವುದು ಕಾಣುತ್ತಿತ್ತು; ಆದರೆ ನೀರಿನ ಮೂಲಕ ನೋಡುತ್ತಿದ್ದುದರಿಂದ ನಮ್ಮ ಕಣ್ಣಿಗೆ ಕಾಣುವದಕ್ಕಿಂತ ದೊಡ್ಡದಾಗಿ ಕಾಣುತ್ತಿತ್ತು. ಒಂದೊಂದು ಸಲ ಏನೋ ಒಂದು

ಕಪ್ಪಾದ ಮೋಡ ಚಂದ್ರ ನಕ್ಷತ್ರಗಳನ್ನು ಮರೆಮಾಡಿ ತೇಲಿಹೋದ ಹಾಗಿರುತ್ತಿತ್ತು. ಆಗ ಅದೊಂದು ತಿಮಿಂಗಿಲವೋ ಜನರು ತುಂಬಿದ ದೊಡ್ಡ ಹಡಗೋ ಇರಬೇಕೆಂದು ಅವಳು ಎಣಿಸುತ್ತಿದ್ದಳು. ಪಾಪ! ತಮ್ಮ ಹಡಗಿನ ಕೆಳಗೆ, ಅದರ ತಳಭಾಗಕ್ಕೆ ತನ್ನ ಬಿಳಿಯ ಕೈಗಳನ್ನು ಚಾಚಿ, ಒಬ್ಬಳು ಸುಂದರಿಯಾದ ಮಿಾನಕನ್ಯೆ ನಿಂತಿರುವಳೆಂದು ಅವರಿಗೇನು ಗೊತ್ತು!

ಹಿರಿಯವಳಿಗೆ ಹದಿನೈದು ವರುಷ ತುಂಬಿದ ಒಡನೆಯೆ, ಸಮುದ್ರದ ಮೇಲುಭಾಗಕ್ಕೆ ಹೋಗಲು ಅವಳಿಗೆ ಅಪ್ಪಣೆ ದೊರಕಿತು. ಹಿಂದಿರುಗಿ ಬಂದಾಗ ಅವಳು ಹೇಳಬೇಕಾದುದು ನೂರಾರು ವಿಷಯ ಇತ್ತು. 'ಆದರೆ ಎಲ್ಲಕ್ಕಿಂತಲೂ ಅತ್ಯಂತ ಸುಂದರವಾದುದೆಂದರೆ – ಆ ಶಾಂತವಾದ ಸಮುದ್ರದ ದಡದಲ್ಲಿ, ಮರಳುಗುಡ್ಡೆಯ ಮೇಲೆ ಬೆಳುದಿಂಗಳಲ್ಲಿ ಮಲಗಿ, ಪಕ್ಕದಲ್ಲಿಯೇ ಇದ್ದ ದೊಡ್ಡ ನಗರದಲ್ಲಿ ನೂರಾರು ನಕ್ಷತ್ರಗಳಂತೆ ಮಿನುಗುತ್ತಿದ್ದ ದೀಪಗಳನ್ನು ನೋಡುವುದು, ಅಲ್ಲಿನ ಸಂಗೀತ, ಆ ಗಾಡಿಗಳ ಶಬ್ದ, ಆ ಮನುಷ್ಯರ ಧ್ವನಿ, ಅಲ್ಲಿನ ದೇವಸ್ಥಾನದ ಗಂಟೆಗಳ ಗಣಗಣ' ಎಂದು ಅವಳು ವರ್ಣಿಸಿದಾಗ ಕೊನೆಯವಳು ಕಿವಿ ತೆರೆದು ಉತ್ಸುಕತೆಯಿಂದ ಕೇಳುತ್ತಿದ್ದಳು. ಆ ಆಶ್ಚರ್ಯಕರವಾದ ವಸ್ತುಗಳನ್ನು ತಾನು ಹೋಗಿ ನೋಡಲು ಸಾಧ್ಯವಿಲ್ಲದುದರಿಂದಲೇ ಅವುಗಳನ್ನು ನೋಡಬೇಕೆಂದು ಅವಳಿಗೆ ಇನ್ನೂ ಹೆಚ್ಚು ಆಸೆಯಾಯಿತು ಇದಾದ ಮೇಲೆ ಆವಳು ತನ್ನ ತೆರೆದ ಕಿಟಕಿಯ ಹತ್ತಿರ ನಿಂತು, ಆ ಕರಿನೀಲಿಯ ನೀರಿನ ಮೂಲಕ ಮೇಲೆ ನೋಡಿ, ಅಲ್ಲಿದ್ದ ಮಹಾನಗರವನ್ನೂ ಅಲ್ಲಿಯ ಶಬ್ದಗಳನ್ನೂ ಕುರಿತು ಚಿಂತಿಸಿದಳು. ಆ ನಗರದ ದೇವಾಲಯಗಳ ಗಂಟೆಯ ಸದ್ದು ಸಮುದ್ರದ ಆ ಆಳಕ್ಕೂ ಕೇಳಿಸುವುದೆಂದು ಭ್ರಮಿಸಿದಳು.

ಇನ್ನೊಂದು ವರ್ಷದ ವೇಳೆಗೆ ಎರಡನೆಯವಳಿಗೆ ಸಮುದ್ರದ ಮೇಲುಭಾಗಕ್ಕೆ ಹೋಗಿ ಅಲ್ಲಿ ತನಗೆ ಇಷ್ಟಬಂದಹಾಗೆ ಈಜಾಡುವುದಕ್ಕೆ ಅಪ್ಪಣೆ ಸಿಕ್ಕಿತು. ಅವಳು ಮೇಲೆ ಬಂದಾಗ ಸೂರ್ಯ ಆಗತಾನೆ ಮುಳುಗುತ್ತಿದ್ದ. ಅದೇ ಅತ್ಯಂತ ಸುಂದರವಾದ ದೃಶ್ಯವೆಂದು ಅವಳು ಹಿಂದಿರುಗಿ ಬಂದಾಗ ಹೇಳಿದಳು. ಇಡಿಯ ಆಕಾಶವೆಲ್ಲ ಚಿನ್ನದ ಹಾಗೆ ಕಾಣುತ್ತಿತ್ತು; ಅವಳ

ತಲೆಯ ಮೇಲೆ ತೇಲಿ ಹೋಗುತ್ತಿದ್ದ ಊದಾಬಣ್ಣದ, ಗುಲಾಬಿ ಬಣ್ಣದ ಮೋಡಗಳನ್ನು ವರ್ಣಿಸಲು ಅವಳಿಗೆ ಮಾತೇ ಸಾಲದೆಹೋಯಿತು ; ಆ ಮೋಡಗಳಿಗಿಂತ ವೇಗವಾಗಿ ಒಂದು ಕಾಡುಹಂಸಗಳ ಗುಂಪು ಮುಳುಗುವ ಸೂರ್ಯನ ಕಡೆಗೆ ಹಾರಿಹೋದಾಗ ಸಮುದ್ರದ ಮೇಲೆ ಒಂದು ಬಿಳಿಯ ಪರದೆ ಎಳೆದಹಾಗಿತ್ತು. ಅವಳು ತಾನೂ ಸೂರ್ಯನ ಕಡೆಗೆ ಈಜಿಕೊಂಡು ಹೋದಳು ; ಆದರೆ ಸೂರ್ಯ ಅಲೆಗಳ ನಡುವೆ ಮುಳುಗಿದ, ಮೋಡಗಳ ಮೇಲೂ ಸಮುದ್ರದ ಮೇಲೂ ಹರಡಿಕೊಂಡಿದ್ದ ಗುಲಾಬಿಯ ರಂಗು ಕ್ರಮೇಣ ಕಣ್ಮರೆಯಾಯಿತು.

ಮೂರನೆಯವಳ ಸರದಿ ಬಂತು. ಆ ಆರು ಜನ ಅಕ್ಕತಂಗಿಯರಲ್ಲಿ ಅವಳೇ ಅತ್ಯಂತ ಧೈರ್ಯಶಾಲಿ. ಅವಳು ಸಮುದ್ರದ ಮೇಲೆದ್ದು, ಸಮುದ್ರಕ್ಕೆ ಬಂದು ಬೀಳುತ್ತಿದ್ದ ಒಂದು ಹೊಳೆಗೆ ಈಜಿಕೊಂಡು ಹೋದಳು. ದಡಗಳ ಮೇಲೆ ಸುಂದರವಾದ ಬಳ್ಳಿಗಳು ದಟ್ಟವಾಗಿ ಬೆಳೆದಿದ್ದ ಹಸುರುಗುಡ್ಡಗಳನ್ನು ನೋಡಿದಳು, ಕಾಡಿನಲ್ಲಿ ಬೆಳೆದು ನಿಂತಿದ್ದ ಎತ್ತರವಾದ ಮರಗಳ ನಡುವೆ ಅರಮನೆಗಳೂ ಕೋಟೆ ಕೊತ್ತಲಗಳೂ ಇಣಿಕಿನೋಡುತ್ತಿದ್ದುವು, ಹಕ್ಕಿಗಳು ಹಾಡುವುದನ್ನು ಕೇಳಿದಳು, ಸೂರ್ಯನ ತಾಪ ಸ್ವಲ್ಪ ಹೆಚ್ಚಾದಾಗ ನೀರಿನೊಳಕ್ಕೆ ಮುಳುಗಿ ಮುಖವನ್ನು ತಂಪುಮಾಡಿಕೊಂಡು ಪುನಃ ಮೇಲೆದ್ದಳು ; ಅಲ್ಲಿ ಒಂದು ಕಡೆ, ಒಂದು ಕೊರಕಲಿನಲ್ಲಿ ಸಣ್ಣಮಕ್ಕಳು ಹಿಂಡುಹಿಂಡಾಗಿ, ಮೈಮೇಲೆ ಬಟ್ಟೆಯಿಲ್ಲದೆ ಬೆತ್ತಲೆಯಾಗಿ ನೀರಿನಲ್ಲಿ ಆಟವಾಡುತ್ತಿದ್ದುದನ್ನು ಕಂಡಳು. ಅವುಗಳೊಡನೆ ತಾನೂ ಆಟವಾಡಬೇಕೆಂದು ಅವಳಿಗೆನ್ನಿಸಿತು ; ಆದರೆ ಹತ್ತಿರ ಹೋದಾಗ ಆ ಮಕ್ಕಳು ಭಯಪಟ್ಟು ಓಡಿಹೋದವು. ಆದಾದ ಮೇಲೆ ಒಂದು ಸಣ್ಣ ಕರಿಯ ಪ್ರಾಣಿ ನೀರಿನ ಬಳಿಗೆ ಬಂತು ಅವಳು ಹಿಂದೆ ಎಂದೂ ಅಂಥದನ್ನು ನೋಡಿರಲಿಲ್ಲವಾದ ಕಾರಣ, ಅದು ನಾಯಿ ಎಂಬುದು ಅವಳಿಗೆ ತಿಳಿಯಲಿಲ್ಲ. ಆ ಪ್ರಾಣಿ ಭಯಂಕರವಾಗಿ ಬಗುಳತೊಡಗಿತು ; ಅವಳು ಅದಕ್ಕೆ ಹೆದರಿಕೊಂಡು ಸಮುದ್ರಕ್ಕೆ ಹಿಂದಿರುಗಿ ಓಡಿದಳು. ಆದರೆ ಆ ಸುಂದರವಾದ ಅರಣ್ಯವನ್ನೂ ಆ ಹಸಿರು ಗುಡ್ಡಗಳನ್ನೂ ಮೀನಿನ ಹಾಗೆ ಬಾಲವಿಲ್ಲದಿದ್ದರೂ ನೀರಿನಲ್ಲಿ ಈಜಾಡುತ್ತಿದ್ದ ಆ ಚೆಲುವು ಮಕ್ಕಳನ್ನೂ

ಅವಳು ಮರೆಯುವಂತಿರಲಿಲ್ಲ. ಅವಳು ಅರಮನೆಗೆ ಹಿಂದಿರುಗಿದಾಗ ಇದನ್ನೆಲ್ಲ ತನ್ನ ಅಕ್ಕತಂಗಿಯರಿಗೆ ಹೇಳಿದಳು.

ನಾಲ್ಕನೆಯವಳಿಗೆ ಮಿಕ್ಕವರಿಗಿಂತ ಹೆದರಿಕೆ ಹೆಚ್ಚು. ಅವಳು ಸಮುದ್ರದ ಮಧ್ಯದಲ್ಲಿ ಮೇಲೆದ್ದವಳು ಅಲ್ಲಿಯೇ ನಿಂತು, 'ಇದು ಸಮುದ್ರದ ದಡದಷ್ಟೇ ಸುಂದರವಾಗಿದೆ' ಎಂದಳು. ಅಲ್ಲಿಂದಲೇ ಸುತ್ತಲೂ ಕಣ್ಣು ಓಡುವವರೆಗೂ ನೋಡಿದಳು. ಮೇಲುಗಡೆ ಆಕಾಶ ಒಂದು ಗಾಜಿನ ಗಂಟೆಯನ್ನು ಕವಿಚಿದಹಾಗಿತ್ತು ಅವಳು ಹಡಗುಗಳನ್ನು ನೋಡಿದಳು, ಆದರೆ ಅವು ಅಷ್ಟು ದೂರದಲ್ಲಿ ಹಕ್ಕಿಗಳ ಹಾಗೆ ಕಂಡು ಬಂತು ಮೀನುಗಳು ಅಲೆಗಳ ಮೇಲೆ ಸವಾರಿ ಮಾಡುತ್ತಿದ್ದುವು. ತಿಮಿಂಗಿಲಗಳು ಮೂಗಿನಿಂದ ನೀರು ಎರಚುತ್ತಿದ್ದುದನ್ನು ನೋಡಿದರೆ ನೂರಾರು ಕಾರಂಜಿಗಳು ಒಮ್ಮೆಗೇ ಸಿಡಿದ ಹಾಗಿತ್ತು.

ಐದನೆಯವಳ ಹುಟ್ಟಿದ ಹಬ್ಬ ಬಂದಾಗ ಚಳಿಗಾಲ ಆದ್ದರಿಂದ ಅವಳ ಸರದಿ ಬಂದಾಗ ಉಳಿದವರು ಮೊದಲನೆಯ ಸಲ ಕಾಣದೆ ಇದ್ದ ದೃಶ್ಯವನ್ನು ಅವಳು ಕಂಡಳು. ಸಮುದ್ರ ಹುಲ್ಲಿನಂತೆ ಹಸುರಾಗಿತ್ತು. ಅದರ ಮೇಲೆ ತೇಲಿಯಾಡುತ್ತಿದ್ದ ಮಂಜಿನ ಬೆಟ್ಟಗಳು ಪ್ರತಿಯೊಂದೂ ಒಂದೊಂದು ದೇವಸ್ಥಾನಕ್ಕಿಂತ ಎತ್ತರವಾಗಿತ್ತು. ಚಿತ್ರವಿಚಿತ್ರವಾದ ಆಕಾರದ ಆ ಮಂಜಿನ ಬೆಟ್ಟಗಳು ವಜ್ರಗಳಂತೆ ಹೊಳೆಯುತ್ತಿದ್ದುವು. ಅವುಗಳಲ್ಲಿ ಅತ್ಯಂತ ದೊಡ್ಡದಾದ ಮಂಜುಗುಡ್ಡದ ಮೇಲೆ ಕುಳಿತಾಗ ಗಾಳಿ ಬಂದು ಅವಳ ನೀಳವಾದ ತಲೆಗೂದಲನ್ನು ಚಿಮ್ಮುತ್ತಿತ್ತು. ಆ ಮಂಜುಗಡ್ಡೆಯನ್ನು ಕಂಡ ಹಡಗುಗಳೆಲ್ಲ ಹೆದರಿಕೊಂಡು ದೂರ ಓಡಿಹೋಗುತ್ತಿದ್ದುವು. ಸಾಯಂಕಾಲದವೇಳೆಗೆ ಸೂರ್ಯನು ಮುಳುಗಿದ ; ಕರಿಯ ಮೋಡಗಳು ಆಕಾಶವನ್ನು ಮುಚ್ಚಿದುವು, ಗುಡುಗು ಗುಡುಗಿತು ; ಮಿಂಚು ಮಿಂಚಿತು ; ಉಬ್ಬರವೆದ್ದು ಇಳಿಯುತ್ತಿದ್ದ ಸಮುದ್ರದ ನಡುವಣ ಮಂಜುಬೆಟ್ಟಗಳ ಮೇಲೆ ಕೆಂಪು ಕಾಂತಿ ಉರಿಯಂತೆ ಬೆಳಗುತ್ತಿತ್ತು. ಹಡಗುಗಳೆಲ್ಲ ಹೆದರಿಕೆಯಿಂದ ನಡನಡುಗಿ, ಹಾಯಿಪಟಗಳನ್ನು ಮುದುರಿಕೊಂಡು ಹೋಗುತ್ತಿದ್ದುವು. ಆದರೆ ಆ ಮೀನಕನ್ಯೆ ಮಾತ್ರ

ತೇಲುವ ಮಂಜುಬೆಟ್ಟದ ಮೇಲೆ ಶಾಂತವಾಗಿ ಕುಳಿತು, ನೀಲಿಯ ಮಿಂಚು ನೂರಾರು ನಾಲಗೆ ಚಾಚುವದನ್ನು ದೃಷ್ಟಿಸುತ್ತಿದ್ದಳು.

ಸಮುದ್ರದ ಮೇಲುಭಾಗಕ್ಕೆ ಹೋಗಬಹುದೆಂದು ಆ ಮಿನಕನ್ಯೆಯರಿಗೆ ಮೊದಲ ಬಾರಿ ಅನುಮತಿ ದೊರೆತಾಗ ತಾವು ಕಂಡ ಹೊಸಹೊಸ ಸುಂದರದೃಶ್ಯಗಳನ್ನು ಕಂಡು ಅವರಿಗೆ ಆನಂದವಾಯಿತು ಆದರೆ ಬರುಬರುತ್ತ ಬೆಳೆದ ಹಾಗೆಲ್ಲ, ತಮಗೆ ಇಷ್ಟಬಂದ ಹಾಗೆ ಹೋಗಿಬರುವ ಸ್ವಾತಂತ್ರ್ಯ ಬಂದ ಹಾಗೆಲ್ಲ ಆ ದೃಶ್ಯಗಳಲ್ಲಿ ಅಸಡ್ಡೆ ಹುಟ್ಟಿತು. ಮೇಲಕ್ಕೆ ಬಂದೊಡನೆ, ತಿರುಗಿ ನೀರಿನೊಳಕ್ಕೆ ಹೋದರೆ ಸಾಕೆನ್ನಿಸಿತು. ಒಂದು ತಿಂಗಳು ಕಳೆಯುವುದರೊಳಗೆ ತಮ್ಮ ಸಮುದ್ರದೊಳಗಿನಷ್ಟು ಸುಂದರವಾದುದು ಯಾವುದೂ ಇಲ್ಲ, ತಮ್ಮ ಮನೆಯಲ್ಲಿ ಸಿಗುವಷ್ಟು ಸುಖ ಬೇರೆ ಎಲ್ಲೂ ಇಲ್ಲ ಎಂದು ಎನ್ನಿಸಿತು. ಆದರೂ ಅನೇಕ ಸಾಯಂಕಾಲಗಳಲ್ಲಿ ಆ ಐದು ಜನ ಅಕ್ಕತಂಗಿಯರೂ ತೋಳಿಗೆ ತೋಳು ಹೆಣೆದುಕೊಂಡು, ಸಾಲಾಗಿ ಸಮುದ್ರದ ಮೇಲುಗಡೆಗೆ ಬರುವರು. ಅವರ ಕಂಠಸ್ವರ ಯಾವ ಮನುಷ್ಯಸ್ವರಕ್ಕಿಂತಲೂ ಇಂಪಾಗಿತ್ತು. ಬಿರುಗಾಳಿ ಬರುವ ಮೊದಲು, ಯಾವುದಾದರೂ ಹಡಗು ಅಲೆಗಳ ಪಾಲಾಗುವುದೆಂದು ಅವರಿಗೆ ಎನ್ನಿಸಿದಾಗ, ಅವರು ಆ ಹಡಗಿನ ಮುಂದೆ ಹೋಗಿ, ಸಮುದ್ರದ ಅಡಿಯಲ್ಲಿ ಕಾಣಬಹುದಾದ ಅಪೂರ್ವವಸ್ತುಗಳನ್ನು ವರ್ಣನೆಮಾಡಿ, ಹಡಗು ಒಡೆದು ಮುಳುಗಿದರೆ ಏನೂ ಹೆದರಬೇಡಿರೆಂದು ಹಡಗಿನವರಿಗೆ ಧೈರ್ಯ ಹೇಳುತ್ತಿದ್ದರು. ಆದರೆ ನಾವಿಕರಿಗೆ ಆ ಹಾಡು ಅರ್ಥವಾಗುತ್ತಿರಲಿಲ್ಲ; ಅವರು ಅದನ್ನು ಬಿರುಗಾಳಿಯ ಮೊರೆತವೆಂದು ತಿಳಿದುಕೊಳ್ಳುತ್ತಿದ್ದರು. ಹಡಗು ಒಡೆದು ಅವರು ಮುಳುಗಿದಾಗ ಅವರು ಯಾವ ಸೌಂದರ್ಯವನ್ನೂ ಕಾಣುವಂತಿರಲಿಲ್ಲ. ಮುಳುಗಿದವರು ಪ್ರಾಣಬಿಡುತ್ತಿದ್ದರು, ಅವರ ಸತ್ತ ದೇಹ ಮಾತ್ರ ಸಮುದ್ರರಾಜನ ಅರಮನೆ ಸೇರುತ್ತಿತ್ತು.

ಹೀಗೆ ಆ ಅಕ್ಕತಂಗಿಯರು ಕೈಕೈ ಹಿಡಿದು ಸಾಲಾಗಿ ಸಮುದ್ರದ ಮೇಲುಭಾಗಕ್ಕೆ ಹೊರಟಾಗ ಕಡೆಯವಳು ಮಾತ್ರ ಒಂಟಿಯಾಗಿ ಅವರು ಹೋದ ದಾರಿಯನ್ನೇ ನೋಡುತ್ತ ನಿಲ್ಲುವಳು. ಅವಳಿಗೆ ಅಳು ಬರುವ ಹಾಗಾಗುವುದು. ಆದರೆ ಮಿನಕನ್ಯೆಯರಿಗೆ ಕಣ್ಣೀರು ಬರುವುದಿಲ್ಲವಾದ್ದರಿಂದ ಅವಳ

ಸಂಕಟ ಇನ್ನೂ ಹೆಚ್ಚುವುದು. ಆಗ ಅವಳು 'ಅಯ್ಯೋ! ನನಗೂ ಹದಿನೈದು ವರುಷವಾಗಬಾರದೆ! ಆ ಮೇಲಿನ ಲೋಕವನ್ನೂ ಅಲ್ಲಿಯ ಜನರನ್ನೂ ಕಂಡರೆ ನನಗೆ ತುಂಬ ಇಷ್ಟ' ಎನ್ನುವಳು.

ಕಡೆಗೆ ಅವಳಿಗೂ ಹದಿನೈದು ವರುಷ ತುಂಬಿತು. ಆಗ ಅವಳ ಅಜ್ಜಿ "ಬಾಮ್ಮ, ಬಾ. ಈಗ ನಿನಗೆ ವಯಸ್ಸು ತುಂಬಿತು. ನೀನು ನಿನ್ನ ಅಕ್ಕಂದಿರ ಹಾಗೆ ಅಲಂಕಾರ ಮಾಡಿಕೊ, ಬಾ" ಎಂದು ಕರೆದು, ಅವಳ ತಲೆಗೆ ಒಂದು ಬಿಳಿಯ ಹೂವಿನ ಮಾಲೆಯನ್ನು ಮುಡಿಸಿದಳು. ಆ ಹೂವಿನ ಒಂದೊಂದು ದಳವೂ ಒಂದೊಂದು ಆಣಿಮುತ್ತಾಗಿತ್ತು. ಅನಂತರ ಆ ಮುದಿರಾಣಿಯ ಆಜ್ಞೆಯ ಪ್ರಕಾರ ಎಂಟು ದೊಡ್ಡ ಮುತ್ತಿನಚಿಪ್ಪುಗಳು ಬಂದು, ಆ ಚಿಕ್ಕ ಮೀನಕನ್ಯೆಯ ಬಾಲದ ಮೇಲೆ ಅಲಂಕಾರವಾಗಿ ಕಚ್ಚಿಕೊಂಡವು.

"ಅಯ್ಯೋ, ತುಂಬ ನೋವಾಗುತ್ತದೆ" ಎಂದು ಚಿಕ್ಕ ಮೀನಕನ್ಯೆ ಹೇಳಿದಳು.

"ಅಂತಸ್ತಿಗೆ ತಕ್ಕ ಹಾಗೆ ಅಲಂಕಾರ ಮಾಡಿಕೊಳ್ಳಬೇಕಾದರೆ ನೋವು ಅನುಭವಿಸಲೇಬೇಕು" ಎಂದು ಅವಳ ಅಜ್ಜಿ ಹೇಳಿದಳು. ಆ ಮೀನಕನ್ಯೆಗೋ, ತನ್ನ ಆ ಅಲಂಕಾರಗಳನ್ನೂ ತಲೆಯ ಮೇಲಿನ ಭಾರವಾದ ಮಾಲೆಯನ್ನೂ ಕಿತ್ತೆಸೆದುಬಿಡಬೇಕೆಂದು ಮನಸ್ಸು. ತನ್ನ ತೋಟದಲ್ಲಿ ಅರಳಿದ್ದ ಕೆಂಪು ಹೂಗಳನ್ನು ಮುಡಿದರೆ ಎಷ್ಟೋ ಮೇಲೆಂದು ಅವಳ ಇಷ್ಟ. ಆದರೆ, ಪಾಪ, ಏನು ಮಾಡಿಯಾಳು? 'ಹೋಗಿ ಬರುತ್ತೇನೆ' ಎಂದು ಎಲ್ಲರಿಗೂ ಹೇಳಿ, ನೀರುಗುಳ್ಳೆಯಂತೆ ಹಗುರವಾಗಿ ಮೇಲೆದ್ದು, ಸಮುದ್ರದ ಹೊರಮೈಯನ್ನು ಮುಟ್ಟಿದಳು

ಅಲೆಗಳ ಮೇಲೆ ಅವಳು ತಲೆಯೆತ್ತಿದಾಗ ಸೂರ್ಯ ಆಗತಾನೆ ಮುಳುಗಿದ್ದ. ಆದರೆ ಮೋಡಗಳಿಗೆ ತಾಮ್ರದ, ಚಿನ್ನದ ಬಣ್ಣ ಬಳಿದಿತ್ತು. ಮಿಸುಕುವ ಆ ಮುಚ್ಚಂಜೆಯ ಬೆಳಕಿನಲ್ಲಿ ಸಂಜೆಯ ನಕ್ಷತ್ರ ಪರಮಸುಂದರವಾಗಿ ಮಿರುಗುತ್ತಿತ್ತು. ಸಮುದ್ರ ಶಾಂತವಾಗಿತ್ತು, ಗಾಳಿ ಮಂದವಾಗಿ ನಿರ್ಮಲ

ವಾಗಿ ಬೀಸುತ್ತಿತ್ತು. ಪಟಕಟ್ಟಿದ ಮೂರು ಕಂಬಗಳ ದೊಡ್ಡದೊಂದು ಹಡಗು ಶಾಂತವಾಗಿ ನೀರಿನ ಮೇಲೆ ನೆಲಸಿತ್ತು; ಅದರಲ್ಲಿ ಒಂದು ಪಟ ಮಾತ್ರ ಬಿಚ್ಚಿತ್ತು. ಗಾಳಿ ಬೀಸುತ್ತಿರಲಿಲ್ಲ, ನಾವಿಕರೆಲ್ಲ ಸೋಮಾರಿಗಳಂತೆ ಅಲ್ಲಿ ಇಲ್ಲಿ ಕುಳಿತಿದ್ದರು. ಹಡಗಿನ ಮೇಲೆ ಸಂಗೀತ, ವಾದ್ಯ ನಡೆಯು ತ್ತಿತ್ತು. ಕತ್ತಲಾದ ಬಳಿಕ ಹಡಗಿನ ಮೇಲೆ ನೂರಾರು ಬಣ್ಣದ ದೀಪಗಳನ್ನು ಹಚ್ಚಿದರು; ಅದನ್ನು ನೋಡಿದರೆ, ಅನೇಕ ದೇಶಗಳ ರಾಷ್ಟ್ರಧ್ವಜಗಳು ಗಾಳಿಯಲ್ಲಿ ಹಾರಾಡುತ್ತಿರುವಂತೆ ಇತ್ತು.

ಚಿಕ್ಕ ಮೀನಕನ್ಯೆ ಆ ಹಡಗಿನ ಕೊಠಡಿಗಳ ಕಿಟಕಿಗಳ ಹತ್ತಿರಕ್ಕೆ ಈಜಿಕೊಂಡು ಹೋದಳು. ಒಂದೊಂದು ಸಲವೂ ಅಲೆಗಳು ಅವಳನ್ನು ಮೇಲಕ್ಕೆ ತೂಗಿದಾಗ ಕೊಠಡಿಯ ಒಳಗಡೆ ಚೆನ್ನಾಗಿ ಉಟ್ಟು ತೊಟ್ಟ ಜನ ಇರುವುದನ್ನು ಅವಳು ಕಿಟಕಿಯ ಮೂಲಕ ಕಂಡಳು. ಅಲ್ಲಿ ಒಳಗಿದ್ದವರಲ್ಲಿ ಒಬ್ಬ ಇನ್ನೂ ಚಿಕ್ಕ ವಯಸ್ಸಿನ ರಾಜಕುಮಾರ ಅಲ್ಲಿ ಇದ್ದವರಲ್ಲೆಲ್ಲ ಅವನೇ ಅತ್ಯಂತ ಸುಂದರ, ವಿಶಾಲವಾದ ಕಪ್ಪು ಕಣ್ಣು, ಅವನಿಗೆ ಹದಿನಾರು ವರ್ಷ. ಆ ದಿನ ಅವನ ಹುಟ್ಟಿದ ಹಬ್ಬದ ಸಮಾರಂಭ ನಾವಿಕರೆಲ್ಲ ಹಡಗಿನ ಮೇಲ್ಗಡೆ ನರ್ತನಮಾಡುತ್ತಿದ್ದರು. ಕೆಳಗಿನ ಕೊಠಡಿಯಿಂದ ರಾಜಕುಮಾರನು ಮೇಲಕ್ಕೆ ಬಂದಾಗ ನೂರಾರು ಬಾಣಬಿರುಸು ಹಚ್ಚಿದರು, ಹಗಲೋ ಎನ್ನುವಷ್ಟು ಪ್ರಕಾಶವಾಯಿತು. ಚಿಕ್ಕ ಮೀನಕನ್ಯೆ ಬೆಚ್ಚಿಬಿದ್ದು, ಪಣಕ್ಕನೆ ನೀರಿನ ಅಡಿಯಲ್ಲಿ ಮುಳುಗಿದಳು ಅವಳು ಪುನಃ ತಲೆಯನ್ನು ಹೊರಗೆ ಚಾಚಿದಾಗ, ಆಕಾಶದ ನಕ್ಷತ್ರಗಳೆಲ್ಲ ತನ್ನ ಸುತ್ತ ಚೆಲ್ಲಿಬೀಳುತ್ತಿವೆಯೋ ಎಂದುಕೊಂಡಳು. ಅಂತಹ ಬಾಣಬಿರುಸುಗಳನ್ನು ಅವಳು ಅದುವರೆಗೆ ಕಂಡಿರಲಿಲ್ಲ. ಅನೇಕ ಮಹಾಸೂರ್ಯರುಗಳು ಬೆಂಕಿಯನ್ನು ಸುತ್ತಲೂ ಕಾರಿದ ಹಾಗೆ, ಚೆಲುವಾದ ಮಿಣುಕುಹುಳುಗಳು ನೀಲಿಯಾದ ವಾಯುಮಾರ್ಗದಲ್ಲಿ ಮಿಣಿಕಿಕೊಂಡು ಹೋದ ಹಾಗೆ ಇತ್ತು. ಅದರಲ್ಲಿ ಪ್ರತಿಯೊಂದೂ ಕೆಳಗಿನ ತಿಳಿಯಾದ, ಶಾಂತವಾದ ಸಮುದ್ರದಲ್ಲಿ ಪ್ರತಿಬಿಂಬಿತವಾಗಿತ್ತು. ಬಾಣಬಿರುಸುಗಳ ಆ ಬಲುಬೆಳಕು ಹಡಗಿನ ಮೇಲೆ ಬಿದ್ದಾಗ, ಅಲ್ಲಿದ್ದ ಮನುಷ್ಯರನ್ನಷ್ಟೇ ಏಕೆ, ಅಲ್ಲಿದ್ದ ಅತಿ ಸಣ್ಣದಾದ ಒಂದು ಹಗ್ಗದ ಚೂರನ್ನು ಕೂಡ, ಸ್ಪಷ್ಟ

ವಾಗಿ ಕಾಣಬಹುದಾಗಿತ್ತು ವಾದ್ಯಗಳು ಆ ರಾತ್ರೆ ಘೋರ್ಗರೆಯುತ್ತಿರು ವಾಗ, ಆ ಬಾಣಬಿರುಸುಗಳ ಬೆಳಕಿನಲ್ಲಿ ಸುತ್ತ ಇದ್ದ ಎಲ್ಲರಿಗೂ ಕೈಮುಗಿದು, ಅವರನ್ನು ವಿಶ್ವಾಸದಿಂದ ಮಾತನಾಡಿಸುತ್ತ ಬಂದ ಆ ರಾಜಕುಮಾರನಾದರೂ ಎಷ್ಟು ಸುಂದರನಾಗಿದ್ದ !

ರಾತ್ರೆ ಬಹಳ ಕಳೆದುಹೋದರು ಕೂಡ ಆ ಚಿಕ್ಕ ಮೀನಕನ್ಯೆಯ ಕಣ್ಣು ಆ ಹಡಗಿನ ಮೇಲೂ ಆ ರಾಜಕುಮಾರನ ಮೇಲೂ ನೆಟ್ಟೇ ಇತ್ತು ಬಣ್ಣ ಬಣ್ಣದ ದೀಪಗಳನ್ನು ಆರಿಸಿಬಿಟ್ಟಿದ್ದರು, ಬಾಣಬಿರುಸು ಮುಗಿದುಹೋಗಿತ್ತು, ಸಮುದ್ರ ತನ್ನ ಶಾಂತತೆಯನ್ನು ಕಳೆದುಕೊಂಡು ಮುಲುಗುತ್ತಿತ್ತು, ಮೊರೆಯುತ್ತಿತ್ತು, ಗುಡುಗುತ್ತಿತ್ತು ಆದರೂ ಆ ಮೀನಕನ್ಯೆ ಹಡಗಿನ ಕೊಠಡಿಯ ಕಿಟಕಿಯ ಬಳಿ ಅಲೆಗಳ ಮೇಲೆ ತೂಗಾಡುತ್ತ ಇನ್ನೂ ಅಲ್ಲಿಯೇ ಇದ್ದಳು. ಸ್ವಲ್ಪ ವೇಳೆಯಾದ ಮೇಲೆ ಹಡಗಿನ ಪಟಗಳನ್ನು ಬಿಚ್ಚಿದರು. ಹಡಗು ಗಂಭೀರವಾಗಿ ತನ್ನ ದಾರಿಯನ್ನು ಹಿಡಿದು ಹೋಯಿತು ಸ್ವಲ್ಪ ಕಾಲದಲ್ಲೆ ಅಲೆಗಳು ದೊಡ್ಡದಾಗಿ ಮೇಲೆದ್ದುವು, ಆಕಾಶದ ತುಂಬ ಕಪ್ಪು ಮೋಡಗಳು ಹೆಪ್ಪುಗಟ್ಟಿಕೊಂಡವು ದೂರದಲ್ಲಿ ಮಿಂಚು ಗೊಂಚಲು ಗೊಂಚಲಾಗಿ ಕವಲೊಡೆಯಿತು. ಭಯಂಕರವಾದ ಬಿರುಗಾಳಿಯೊಂದು ಹತ್ತಿರಕ್ಕೆ ಬರುತ್ತಿತ್ತು ಹಡಗಿನ ಪಟಗಳನ್ನು ಪುನಃ ಸುರುಳಿಸುತ್ತಿದರು. ಕೋಪಗೊಂಡು ಕುದಿಯುತ್ತಿದ್ದ ಸಮುದ್ರದ ಮೇಲೆ ಹಡಗು ದಾರಿಯನ್ನು ಸೀಳಿಕೊಂಡು ಹೋಯಿತು. ಅಲೆಗಳು ಬೆಟ್ಟಗಳಷ್ಟು ಎತ್ತರ ಮೇಲೆದ್ದುವು; ಹಡಗಿನ ಕಂಬಗಳ ತಲೆಯನ್ನು ಮುಟ್ಟುವಂತೆ ಮೇಲೆದ್ದುವು ಆದರೆ ಹಡಗು ಅವುಗಳ ನಡುವೆ ಹಂಸದ ಹಾಗೆ ಮುಳುಗಿ, ತುದಿಯಲ್ಲಿ ನೊರೆಗಳನ್ನು ಉಗುಳುತ್ತ ಪುನಃ ಮೇಲೆ ತಲೆಯೆತ್ತಿತು. ಇದನ್ನೆಲ್ಲ ನೋಡುತ್ತಿದ್ದ ಚಿಕ್ಕ ಮೀನಕನ್ಯೆಗೆ ಅದೊಂದು ವಿನೋದಕ್ರೀಡೆಯಾಗಿತ್ತು, ಆದರೆ ನಾವಿಕರಿಗೆ ಅದು ಸಾವಿನೊಡನೆ ಹೋರಾಟವಾಗಿತ್ತು. ಕಟ್ಟಕಡೆಗೆ ಹಡಗು ನರಳಿತು, ಬಿರಿಯುವ ಶಬ್ದಮಾಡಿತು, ಸಮುದ್ರದ ಅಲೆಗಳ ಚಾಟಿಯೇಟನ್ನು ತಡೆಯ ಲಾರದೆ ಹಡಗಿನ ದಪ್ಪ ಹಲಗೆಗಳು ಘಳ್ಳೆಂದು ಸೀಳಿದುವು, ಹಡಗಿನ ನಡುಗಂಬ ಜೋಳದ ಕಡ್ಡಿಯಂತೆ ಮುರಿದುಬಿತ್ತು; ಹಡಗು ಒಂದು ಮಗ್ಗು ಲಾಗಿ ಮಲಗಿತು; ನೀರು ಒಳಗೆ ನುಗ್ಗಿತು. ಹಡಗಿನಲ್ಲಿದ್ದವರಿಗೆ ಎಂಥ

ಅಪಾಯ ಸಂಭವಿಸಿತೆಂಬುದು ಆಗತಾನೆ ಆ ಮೀನಕನ್ಯೆಗೆ ಗೊತ್ತಾಯಿತು. ಅಷ್ಟೇಕೆ, ಹಡಗಿನ ಒಡೆದ ತೊಲೆಗಳೂ ಹಲಗೆಗಳೂ ನೀರಿನ ವೇಗಕ್ಕೆ ಚೆದರಿದಾಗ, ಅವುಗಳ ಏಟಿಗೆ ಸಿಕ್ಕದಂತೆ ತಪ್ಪಿಸಿಕೊಳ್ಳುವುದು ಅವಳಿಗೂ ಕಠಿಣವಾಯಿತು. ಒಂದು ಕ್ಷಣದಲ್ಲಿ ಕಣ್ಣಿಗೆ ಒಂದು ಚೂರೂ ಗೋಚರವಾಗದಷ್ಟು ಕತ್ತಲೆ ಕವಿದಿರುವುದು, ಇನ್ನೊಂದು ಕ್ಷಣದಲ್ಲಿ ಮಿಂಚಿನ ಬೆಳಕಿನಲ್ಲಿ ಸಮಸ್ತವೂ ಸ್ಪಷ್ಟವಾಗುವುದು. ಹಡಗಿನ ಮೇಲಿದ್ದವರಲ್ಲಿ ರಾಜಕುಮಾರನನು ಹೊರತು ಮಿಕ್ಕವರನ್ನು ಅವಳು ಕಂಡಳು ಹಡಗು ಒಡೆದಾಗ ಆ ರಾಜಕುಮಾರನು ದೊಡ್ಡ ಅಲೆಗಳ ಕೆಳಗೆ ಮುಳುಗಿದುದನ್ನು ಕಂಡು, ಅವನು ಇನ್ನು ತನ್ನ ಸಂಗಡ ಇರಬಹುದೆಂದುಕೊಂಡು, ಅವಳು ಸಂತೋಷಗೊಂಡಿದ್ದಳು ಆದರೆ ಮನುಷ್ಯಜೀವಿಗಳು ನೀರಿನ ಅಡಿಯಲ್ಲಿ ಬದುಕಲಾರರು, ತನ್ನ ತಂದೆಯ ಅರಮನೆಗೆ ಬರುವ ವೇಳೆಗೆ ರಾಜಕುಮಾರನು ಸತ್ತು ಹೋಗಿರುವನು ಎಂಬುದು ಅವಳಿಗೆ ಆಮೇಲೆ ಹೊಳೆಯಿತು. ಆದರೆ ಆ ರಾಜಕುಮಾರನು ಸಾಯಕೂಡದೆಂದು ಅವಳು ನಿಶ್ಚಯಮಾಡಿಕೊಂಡಳು ಅದಕ್ಕೋಸ್ಕರ ಅವಳು, ಸಮುದ್ರದ ಮೇಲೆ ಚೆಲ್ಲಿಹೋಗಿದ್ದ ತೊಲೆಗಳು, ಹಲಗೆಗಳು ಇವುಗಳ ನಡುವೆ ಈಜಿಕೊಂಡು ಓಡಿಯಾಡಿ ಹುಡುಕಿದಳು, ಅವುಗಳ ಏಟಿಗೆ ಸಿಕ್ಕಿದರೆ ತಾನು ಸಾಯುವೆನೆಂಬುದನ್ನೂ ಮರೆತಳು. ಅಲ್ಲಿನ ಅಲೆಗಳೊಡನೆ ಏಳುತ್ತ ಬೀಳುತ್ತ, ಸಮುದ್ರದ ಆ ಕರಿಯ ನೀರಿನ ಆಳದಲ್ಲಿ ಮುಳುಗಿ, ಕಡೆಗೆ ಆ ರಾಜಕುಮಾರನನ್ನು ಕಂಡಳು. ಅವನಿಗೂ ಆ ಕಲಕುತ್ತಿದ್ದ ಸಮುದ್ರದಲ್ಲಿ ಈಜಿ ಈಜಿ ಶಕ್ತಿ ಕುಂದಿಹೋಗುತ್ತಿತ್ತು; ಕೈಕಾಲುಗಳಲ್ಲಿ ತ್ರಾಣ ಕಡಿಮೆಯಾಗುತ್ತಿತ್ತು, ಅವನ ಸುಂದರವಾದ ಕಣ್ಣು ಎರಡೂ ಮುಚ್ಚಿಕೊಂಡಿತ್ತು. ಆ ಚಿಕ್ಕ ಮೀನಕನ್ಯೆ ಅವನ ಸಹಾಯಕ್ಕೆ ಬಾರದಿದ್ದಿದ್ದರೆ ಅವನ ಕತೆ ಮುಗಿಯುತ್ತಿತ್ತು. ಅಲೆಗಳು ಸೋಕದ ಹಾಗೆ ಅವಳು ಅವನ ತಲೆಯನ್ನು ನೀರಿನಿಂದ ಮೇಲೆ ಎತ್ತಿದಳು.

ಬೆಳಗಾಗುವ ವೇಳೆಗೆ ಬಿರುಗಾಳಿ ನಿಂತಿತ್ತು. ಆದರೆ ಒಡೆದ ಹಡಗಿನ ಒಂದು ಚೂರೂ ಕಣ್ಣಿಗೆ ಕಾಣಲಿಲ್ಲ. ಸೂರ್ಯನು ಕೆಂಪಗೆ ತೊಳಗುತ್ತ ನೀರಿನಿಂದ ಮೇಲೆದ್ದನು ಅವನ ಕಿರಣಗಳು ರಾಜಕುಮಾರನ ಕೆನ್ನೆಗಳಿಗೆ ಆರೋಗ್ಯದ ಕೆಂಪುಬಣ್ಣ ಕೊಟ್ಟುವು; ಆದರೂ ಅವನ ಕಣ್ಣು ಇನ್ನೂ

ಮುಚ್ಚಿತ್ತು. ಮೀನಕನ್ಯೆಯು ಅವನ ನುಣುಪಾದ ಹಣೆಯ ಮೇಲೆ ಮುತ್ತಿಟ್ಟು, ಅವನ ನೆನೆದ ತಲೆಗೂದಲನ್ನು ಹಿಂದುಗಡೆಗೆ ನೇವರಿಸಿದಳು. ಮೀನಕನ್ಯೆ ರಾಜಕುಮಾರನನ್ನು ನೋಡಿ, ತನ್ನ ತೋಟದಲ್ಲಿದ್ದ ಬಿಳಿಶಿಲೆಯ ವಿಗ್ರಹವನ್ನು ಜ್ಞಾಪಿಸಿಕೊಂಡು, ಅವನನ್ನು ಪುನಃ ಮುದ್ದಿಟ್ಟು, ಅವನು ಬದುಕಬೇಕೆಂದು ಬಯಸಿದಳು. ಅಷ್ಟರಲ್ಲಿ ಅವರು ನೆಲ ಕಾಣುವಷ್ಟು ದಡದ ಹತ್ತಿರ ಬಂದರು. ಎತ್ತರವಾದ ನೀಲಿಯ ಪರ್ವತಗಳನ್ನು ಅವಳು ಕಂಡಳು, ಆ ಬೆಟ್ಟಗಳ ಮೇಲೆ ಬಿಳಿಯ ಹಿಮ ಹಂಸಗಳ ಹಿಂಡಿನಂತೆ ಮಲಗಿದ್ದುದನ್ನೂ ಕಂಡಳು. ಸಮುದ್ರತೀರದ ಸಮೀಪದಲ್ಲಿ ಸುಂದರವಾದ ಹಸುರುಕಾಡುಗಳು ಇದ್ದುವು. ಅದರ ಬಳಿ ಇದ್ದ ದೊಡ್ಡ ಕಟ್ಟಡವು ಮಠವೋ ದೇವಸ್ಥಾನವೋ ಎಂಬುದು ಅವಳಿಗೆ ತಿಳಿಯಲಿಲ್ಲ ತೋಟದಲ್ಲಿ ಕಿತ್ತಿಳೆ, ನಿಂಬೆ ಗಿಡಗಳು ಬೆಳೆದಿದ್ದುವು; ಬಾಗಿಲ ಮುಂದೆ ಎತ್ತರವಾದ ತಾಳೆಯ ಮರಗಳಿದ್ದುವು. ಆ ಸ್ಥಳದಲ್ಲಿ ಸಮುದ್ರ ಒಂದು ಕೊಲ್ಲಿಯಾಗಿ, ನೀರು ಚಲಿಸದೆ ನಿಂತಿದ್ದರೂ ಆಳ ಬಹಳವಾಗಿತ್ತು. ಆದ್ದರಿಂದ, ಅವಳು ಅಲ್ಲಿ ನುಣುಪಾದ ಬಿಳಿಯ ಮರಳು ಹರಡಿದ ಸಮುದ್ರತೀರಕ್ಕೆ ಅವನೊಡನೆ ಈಜಿಕೊಂಡು ಹೋಗಿ, ಅವನ ತಲೆ ಉಳಿದ ದೇಹಕ್ಕಿಂತ ಎತ್ತರವಾಗಿರುವ ಹಾಗೆ ಹಿತವಾದ ಆ ಬಿಸಿಲಿನಲ್ಲಿ ಮಲಗಿಸಿದಳು ಆಗ ಆ ದೊಡ್ಡ ಕಟ್ಟಡದಲ್ಲಿ ಗಂಟೆಗಳ ಶಬ್ದ ವಾಯಿತು, ಅನೇಕ ಹುಡುಗಿಯರು ಒಳಗಿನಿಂದ ಹೊರಗಿನ ತೋಟಕ್ಕೆ ಬಂದರು ಚಿಕ್ಕ ಮೀನಕನ್ಯೆಯು ಸಮುದ್ರದ ಒಳಕ್ಕೆ ಈಜಿಕೊಂಡು ಹೋಗಿ, ಸಮುದ್ರದಲ್ಲಿ ನಿಂತಿದ್ದ ಕೆಲವು ಬಂಡೆಗಳ ಮಧ್ಯೆ ಅವಿತುಕೊಂಡಳು, ಅಲ್ಲಿ, ತನ್ನ ಸಣ್ಣಮುಖ ಕಾಣಿಸಬಾರದ ಹಾಗೆ ತಲೆ ಕತ್ತುಗಳನ್ನು ಸಮುದ್ರದ ನೊರೆಯಿಂದ ಮುಚ್ಚಿಕೊಂಡು, ರಾಜಕುಮಾರನನ್ನೇ ದೂರದಿಂದ ದೃಷ್ಟಿಸ ತೊಡಗಿದಳು.

ಸ್ವಲ್ಪ ಹೊತ್ತಿನಲ್ಲೇ ಒಬ್ಬ ಹುಡುಗಿ ಅವನು ಮಲಗಿದ್ದ ಸ್ಥಳಕ್ಕೆ ಬಂದಳು. ಅವಳಿಗೆ ಮೊದಲು ಹೆದರಿಕೆಯಾದರೂ, ಮರುಕ್ಷಣದಲ್ಲೇ ಅವಳು ಹೋಗಿ ಅನೇಕ ಜನರನ್ನು ಕರೆದುತಂದಳು. ಆಗ ರಾಜಕುಮಾರನು ಚೇತರಿಸಿ ಕೊಂಡು, ಸುತ್ತ ನಿಂತವರನ್ನು ಕಂಡು ಮೃದುವಾಗಿ ನಕ್ಕದ್ದನ್ನು ಮೀನಕನ್ಯೆ ಕಂಡಳು. ಆದರೆ ಅವನು ಅವಳ ಕಡೆ ತಿರುಗಿ ಮೃದುವಾಗಿ ನಗಲಿಲ್ಲ;

ಅವಳು ತನ್ನನ್ನು ಕಾಪಾಡಿದಳೆಂಬುದನ್ನೂ ಅವನು ಅರಿಯ. ಇದರಿಂದ ಆ ಮೀನಕನ್ಯೆಯ ಮನಸ್ಸಿಗೆ ದುಃಖವಾಯಿತು. ರಾಜಕುಮಾರನನ್ನು ಆ ದೊಡ್ಡ ಕಟ್ಟಡದೊಳಕ್ಕೆ ಕರೆದುಕೊಂಡು ಹೋದಾಗ, ಅವಳು ದುಮ್ಮಾನದಿಂದ ನೀರಿನೊಳಕ್ಕೆ ಮುಳುಗಿ, ತನ್ನ ತಂದೆಯ ಅರಮನೆಗೆ ಹಿಂದಿರುಗಿದಳು. ಅವಳು ಮೊದಲೇ ಮಾತನಾಡುತ್ತಿದ್ದುದು ಕಡಮೆ, ಅದು ಈಗ ಇನ್ನೂ ಕಡಮೆಯಾಯಿತು. ಅವಳು ಮೊದಲಿದ್ದುದಕ್ಕಿಂತ ಹೆಚ್ಚು ಚಿಂತಾಪರಳಾದಳು.

'ನೀರಿನ ಮೇಲುಭಾಗಕ್ಕೆ ಹೋದಾಗ ನೀನು ಏನು ಕಂಡೆ?' ಎಂದು ಅವಳ ಅಕ್ಕಂದಿರು ಅವಳನ್ನು ಕೇಳಿದರು, ಆದರೆ ಅವಳಿಗೆ ಏನು ಹೇಳುವುದಕ್ಕೂ ಬೇಕಾಗಲಿಲ್ಲ. ಅನೇಕಸಲ ಸಾಯಂಕಾಲಗಳಲ್ಲೂ ಪ್ರಾತಃಕಾಲಗಳಲ್ಲೂ ಅವಳು ತಾನು ರಾಜಕುಮಾರನನ್ನು ಬಿಟ್ಟು ಬಂದ ಸ್ಥಳದಲ್ಲಿ ಮೇಲೆದ್ದು ಬರುವಳು. ತೋಟದಲ್ಲಿ ಹಣ್ಣು ಪಕ್ವವಾಗಿ ಕುಯಿಲಾದುದನ್ನೂ ಪರ್ವತಗಳ ಶಿಖರದಲ್ಲಿ ಮಂಜು ಕರಗಿ ಮಾಯವಾದುದನ್ನೂ ಕಂಡಳು, ಆದರೆ ರಾಜಕುಮಾರನನ್ನು ಮಾತ್ರ ಕಾಣಲಿಲ್ಲ. ಆ ಕಾರಣದಿಂದ ಮನೆಗೆ ಹಿಂದಿರುಗುವಾಗಲೆಲ್ಲ ಮೊದಲಿಗಿಂತ ಹೆಚ್ಚು ದುಃಖಿತಳಾಗಿ ಹಿಂದಿರುಗುತ್ತಿದ್ದಳು. ಅವಳಿಗೆ ಇದ್ದುದು ಒಂದೇ ಸಮಾಧಾನ. ಅದೇನೆಂದರೆ, ತನ್ನ ಸಣ್ಣ ತೋಟದಲ್ಲಿ ಕುಳಿತು, ರಾಜಕುಮಾರನ ಹಾಗಿದ್ದ ಆ ಬಿಳಿಯ ಕಲ್ಲಿನ ವಿಗ್ರಹವನ್ನು ತೋಳುಗಳಿಂದ ತಬ್ಬಿಕೊಳ್ಳುತ್ತಿದ್ದಳು. ಆ ಕಾರಣದಿಂದ ಹೂವುಗಳಿಗೆ ಅವಳ ಪಾಲನೆ ತಪ್ಪಿಹೋಗಿ, ಅವುಗಳು ಮನಸ್ಸು ಬಂದ ಹಾಗೆ ಮಾರ್ಗಗಳ ಮೇಲೆಲ್ಲ ಬೆಳೆದು, ಅವುಗಳ ಉದ್ದವಾದ ಎಲೆಗಳೂ ಕಡ್ಡಿಗಳೂ ಮರಗಳ ಕೊಂಬೆಗಳಿಗೆಲ್ಲ ಹೆಣೆದುಕೊಂಡು, ಆ ಇಡಿಯ ಪ್ರದೇಶವೆಲ್ಲ ಕತ್ತಲೆಯಾಗಿ ಮಂಕಾಗಿಬಿಟ್ಟಿತ್ತು. ಕಟ್ಟಕಡೆಗೆ ಅವಳಿಗೂ ಸಹಿಸಲಾರದೆಹೋಗಿ ತನ್ನ ಒಬ್ಬ ಅಕ್ಕನಿಗೆ ತನ್ನ ದುಃಖವನ್ನೆಲ್ಲಾ ಹೇಳಿಕೊಂಡಳು. ಅವಳು ಅದನ್ನು ಉಳಿದವರಿಗೆ ಹೇಳಿದಳು. ಆ ಸುದ್ದಿ ಕಿವಿಯಿಂದ ಕಿವಿಗೆ ಹರಡಿತು. ಅದನ್ನು ಕೇಳಿದ ಇಬ್ಬರು ಮೀನಕನ್ಯೆಯರ ಆಪ್ತಸ್ನೇಹಿತೆಯೊಬ್ಬಳಿಗೆ ಆ ರಾಜಕುಮಾರನು ಯಾರೆಂದು ಗೊತ್ತಿತ್ತು. ಅವಳೂ ಆ ದಿನ ಹಡಗಿನಲ್ಲಿ ನಡೆದ ಹಬ್ಬವನ್ನು ನೋಡಿದ್ದಳು. ಆ ರಾಜಕುಮಾರನು ಎಲ್ಲಿಂದ ಬಂದನೆಂಬು

ದನ್ನೂ ಅವನ ಅರಮನೆ ಇದ್ದ ಸ್ಥಳವನ್ನೂ ಅವಳೇ ಆ ಸಮುದ್ರರಾಜಕನ್ಯೆಯರಿಗೆ ತಿಳಿಸಿದಳು.

ಆಗ ಆ ಸಮುದ್ರರಾಜಕನ್ಯೆಯರು ತಮ್ಮ ತಂಗಿಯನ್ನು 'ಬಾ, ಚಿಕ್ಕ ತಂಗಿ' ಎಂದು ಜೊತೆಯಲ್ಲಿ ಕರೆದುಕೊಂಡು, ತೋಳಿಗೆ ತೋಳು ಹೆಣೆದುಕೊಂಡು, ಸಾಲಾಗಿ ಹೊರಟು, ಸಮುದ್ರದ ಮೇಲುಭಾಗಕ್ಕೆ ಎದ್ದು, ರಾಜಕುಮಾರನ ಅರಮನೆಯಿದ್ದ ಸ್ಥಳಕ್ಕೆ ಬಂದರು ಆ ಅರಮನೆ ಹಳದಿಯ ಕಲ್ಲಿನಿಂದ ಕಟ್ಟಿದ್ದು, ಅದರ ಅಮೃತಶಿಲೆಯ ಮೆಟ್ಟಲುಗಳು ಸಮುದ್ರದವರೆಗೂ ಬಂದು ಚಾಚಿದ್ದುವು ಆ ಅರಮನೆಯ ಮೇಲು ಭಾಗದಲ್ಲಿ ಸೊಗಸಾದ ಚಿನ್ನದ ಭುವನೇಶ್ವರಿಗಳು, ಆ ಅರಮನೆಯ ಸುತ್ತಲೂ ಇದ್ದ ದೊಡ್ಡ ದೊಡ್ಡ ಕಂಬಗಳ ನಡುನಡುವೆ ಆಳೆತ್ತರದ ಅಮೃತಶಿಲೆಯ ವಿಗ್ರಹಗಳು ಆ ಅರಮನೆಯ ಸ್ಫಟಿಕದ ಕಿಟಕಿಗಳಲ್ಲಿ ಒಳಭಾಗವೂ ಅಲ್ಲಿ ನೇತುಬಿಟ್ಟಿದ್ದ ರೇಶಿಮೆಯ ಪರದೆಗಳೂ ಚಿತ್ತಾರದ ಕೆಲಸಗಳೂ ಕಾಣಿಸುತ್ತಿದ್ದುವು ಗೋಡೆಗಳ ಮೇಲೆ ಸಾಲುಸಾಲಾಗಿದ್ದ ಸುಂದರವಾದ ಚಿತ್ರಪಟಗಳನ್ನು ನೋಡಿದರೆ ತುಂಬ ಸಂತೋಷವಾಗುತ್ತಿತ್ತು. ಅಲ್ಲಿನ ದೊಡ್ಡ ಅಂಗಳದ ಮಧ್ಯೆ ಒಂದು ಕಾರಂಜಿ ಬೆಳಗುವ ನೀರಿನ ಧಾರೆಗಳನ್ನು ಮೇಲುಗಡೆಯ ಗಾಜಿನ ಭುವನೇಶ್ವರಿಗೆ ಎರಚುತ್ತಿತ್ತು, ಮೇಲಿನ ಭುವನೇಶ್ವರಿಯಿಂದ ಸೂರ್ಯನ ಬೆಳಕು ಕೆಳಗಿನ ನೀರಿನ ಮೇಲೂ ಕಾರಂಜಿಯ ಪಾತ್ರೆಯ ಸುತ್ತ ಬೆಳೆದಿದ್ದ ಸುಂದರವಾದ ಹೂಗಿಡಗಳ ಮೇಲೂ ಬಿದ್ದು ಬೆಳಗುತ್ತಿತ್ತು.

ಚಿಕ್ಕ ಮೀನಕನ್ಯೆ, ರಾಜಕುಮಾರನು ವಾಸವಾಗಿದ್ದ ಸ್ಥಳ ತಿಳಿದ ಮೇಲೆ, ಅನೇಕ ಸಾಯಂಕಾಲ ರಾತ್ರಿಗಳು ಆ ಅರಮನೆಯ ಸಮೀಪದ ನೀರಿನಲ್ಲಿಯೇ ಬಂದು ಇರುತ್ತಿದ್ದಳು. ಮಿಕ್ಕವರು ಹೋಗುತ್ತಿದ್ದುದಕ್ಕಿಂತ ಹೆಚ್ಚು ಹತ್ತಿರ ಹೋಗುತ್ತಿದ್ದಳು. ಒಂದು ಸಲವಂತೂ ಅಮೃತಶಿಲೆಯ ಮುಖಶಾಲೆಯ ಕೆಳಗೆ ಹರಿಯುತ್ತಿದ್ದ ಕಾಲುವೆಗೆ ಹೋಗಿದ್ದಳು ನೀರಿನ ಮೇಲೆ ಬಿದ್ದ ಆ ಮುಖಶಾಲೆಯ ನೆರಳಿನಲ್ಲಿ ಕುಳಿತು, ಬೆಳುದಿಂಗಳಿನಲ್ಲಿ ತಾನೊಬ್ಬನೇ ಇರುವೆನೆಂದುಕೊಂಡಿದ್ದ ರಾಜಕುಮಾರನನ್ನೇ ದೃಷ್ಟಿಸುತ್ತಿದ್ದಳು ಅನೇಕ ಸಲ ಅವನು ವಿಹಾರಕ್ಕಾಗಿ ದೋಣಿಯಲ್ಲಿ ಹೊರಟಾಗ, ಅವಳು

ಅವನನ್ನು ನೋಡಿದಳು. ಹಸಿರು ಜೊಂಡುಗಳ ಮರೆಯಿಂದ ಇಣಿಕಿಣಿಕಿ ನೋಡಿದಳು ಬೆಳ್ಳಿಯಂತೆ ಬಿಳುಪಾದ ಅವಳ ಅವಕುಂಠನವು ಗಾಳಿಗೆ ಸಿಕ್ಕಿ ಹಾರಾಡಿದರೆ, ಅದನ್ನು ಕಂಡವರು ಯಾವುದೋ ಹಂಸ ಗರಿ ಕೆದರಿ ಕೊಳ್ಳುತ್ತಿದೆ ಎಂದುಕೊಳ್ಳುವರು. ಅನೇಕ ಸಲ ರಾತ್ರಿಯ ಹೊತ್ತು ಬೆಸ್ತರು ಪಂಜುಗಳನ್ನು ಹತ್ತಿಸಿಕೊಂಡು ಸಮುದ್ರಕ್ಕೆ ಹೋದಾಗ ಆ ರಾಜಕುಮಾರನು ಮಾಡಿದ ಅನೇಕ ಒಳ್ಳೆಯ ಕೆಲಸಗಳನ್ನು ಕುರಿತು ಮಾತನಾಡುವರು; ಮೀನಕನ್ಯೆ ಅದನ್ನು ಕೇಳಿ, ಅಂತಹವನು ಅರ್ಧಸತ್ತು ಅಲೆಗಳ ನಡುವೆ ಅಲೆದಾಡುತ್ತಿದ್ದಾಗ ತಾನು ಅವನನ್ನು ಬದುಕಿಸಿದೆನಲ್ಲಾ ಎಂದು ಹಿಗ್ಗುವಳು. ತಾನು ಅವನನ್ನು ತಬ್ಬಿಕೊಂಡು ದಡಕ್ಕೆ ಕರೆದುತಂದುದನ್ನೂ ತಾನು ಮನಃ ಪೂರ್ವಕವಾಗಿ ಅವನಿಗೆ ಮುತ್ತಿಟ್ಟುದನ್ನೂ ಜ್ಞಾಪಿಸಿಕೊಳ್ಳುವಳು ಆದರೆ, ಪಾಪ, ರಾಜಕುಮಾರನಿಗೆ ಮಾತ್ರ ಇದೊಂದೂ ತಿಳಿಯದು; ಮೀನಕನ್ಯೆ ಅವನ ಕನಸಿನಲ್ಲಿ ಕೂಡ ಕಾಣಿಸಿಕೊಳ್ಳುತ್ತಿರಲಿಲ್ಲ.

ಬರುಬರುತ್ತ ಅವಳಿಗೆ ಮನುಷ್ಯಪ್ರಾಣಿಗಳನ್ನು ಕಂಡರೆ ಹೆಚ್ಚುಹೆಚ್ಚು ಇಷ್ಟವಾಯಿತು ತನ್ನ ಲೋಕಕ್ಕಿಂತ ದೊಡ್ಡದಾದ ಲೋಕದಲ್ಲಿರುವ ಅವ ರೊಡನೆ ಸೇರಿ ಓಡಿಯಾಡಲು ತಾನೂ ಸಮರ್ಥಳಾಗಬೇಕೆಂದು ಅವಳಿಗೆ ಆಸೆ ಬೆಳೆಯಿತು. ಅವರು ಸಮುದ್ರದ ಮೇಲೆ ಹಡಗುಗಳಲ್ಲಿ ಹಾರಿಹೋಗು ವರು, ಮೋಡಗಳನ್ನು ತಿವಿದು ನಿಂತ ಉನ್ನತ ಪರ್ವತಗಳನ್ನು ಏರುವರು, ಅವರ ಕಾಡುಗಳೂ ಹೊಲಗಳೂ ಕಣ್ಣ ಅಳತೆಗೆ ನಿಲುಕದಷ್ಟು ದೂರದ ವರೆಗೂ ಚಾಚಿಕೊಂಡಿದ್ದುವು. ಅವರ ವಿಚಾರವಾಗಿ ಇನ್ನೂ ಏನೇನೋ ತಿಳಿದುಕೊಳ್ಳಬೇಕೆಂದು ಆ ಮೀನಕನ್ಯೆಗೆ ಮನಸ್ಸು; ಆದರೆ ಅವಳ ಅಕ್ಕಂ ದಿರಿಗೆ ಯಾರಿಗೂ ಅವಳ ಪ್ರಶ್ನೆಗಳಿಗೆ ಉತ್ತರ ಹೇಳುವ ಸಾಮರ್ಥ್ಯವಿರಲಿಲ್ಲ ಆಗ ಅವಳು ತನ್ನ ಮುದಿ ಅಜ್ಜಿಯ ಬಳಿ ಹೋಗಿ ವಿಚಾರಿಸಿದಳು ಅವಳಿಗೆ ಆ ಮೇಲುಲೋಕದ ಸಂಗತಿ ಗೊತ್ತಿತ್ತು. ಅದನ್ನು ಆ ಮುದುಕಿ 'ಸಮು ದ್ರದ ಮೇಲಿನ ನಾಡು' ಎಂದು ಕರೆಯುತ್ತಿದ್ದಳು.

"ಅಜ್ಜಿ, ಮನುಷ್ಯರು ನೀರಿನಲ್ಲಿ ಮುಳುಗಿ ಸಾಯದೆ ಇದ್ದರೆ ಅವರು ಅನಂತಕಾಲ ಬದುಕಬಲ್ಲರೇನು? ಸಮುದ್ರದಲ್ಲಿ ಇರುವ ನಾವು ಸಾಯುವ

ಹಾಗೆ ಸಾಯದೆ ಎಂದೆಂದಿಗೂ ಬದುಕಿರಬಲ್ಲರೇನು ?" ಎಂದು ಚಿಕ್ಕ ಮೀನ ಕನ್ಯೆ ತನ್ನ ಅಜ್ಜಿಯನ್ನು ಕೇಳಿದಳು

" ಇಲ್ಲ, ಇಲ್ಲ, ಅವರೂ ಸಾಯಬೇಕು ಅವರ ಆಯುಸ್ಸಿನ ಪರಿಮಾಣ ನಮ್ಮದಕ್ಕಿಂತ ಕಡಿಮೆ ನಾವು ಕೆಲವು ವೇಳೆ ಮುನ್ನೂರು ವರ್ಷ ಕಾಲ ಬದುಕುತ್ತೇವೆ; ನಮ್ಮ ಬದುಕು ಮುಗಿದಾಗ ನಾವು ನೀರಿನ ಮೇಲಿನ ನೊರೆಯಾಗುತ್ತೇವೆ; ನಮಗೆ ಬೇಕಾದವರನ್ನು ನಾವು ಸಮಾಧಿ ಕೂಡ ಮಾಡುವಂತಿಲ್ಲ. ನಮಗೆ ಅಮೃತವಾದ ಆತ್ಮಗಳಿಲ್ಲ, ನಮಗೆ ಪುನರ್ಜನ್ಮವಿಲ್ಲ, ಸಮುದ್ರದಲ್ಲಿ ನೀನು ನೋಡಿರುವ ಹಸಿರು ಜೊಂಡು ಒಂದು ಸಲ ಕತ್ತರಿಸಿ ಹಾಕಿದರೆ ಹೇಗೆ ಪುನಃ ಬೆಳೆಯಲಾರದೋ ಹಾಗೆ ನಾವೂ ಸತ್ತ ಮೇಲೆ ತಿರುಗಿ ಹುಟ್ಟುವಂತಿಲ್ಲ. ಆದರೆ ಮನುಷ್ಯರಿಗಾದರೋ ಸದಾಕಾಲಕ್ಕೂ ಶಾಶ್ವತವಾಗಿರುವ ಆತ್ಮವುಂಟು, ಅವರ ದೇಹ ದೂಳಾಗಿ ಹೋದರೂ ಆ ಆತ್ಮ ಮಾತ್ರ ಶಾಶ್ವತವಾಗಿರುತ್ತದೆ. ಅದು ಮೇಲುಮುಖವಾಗಿ ಹೊರಟು, ಸ್ವಚ್ಛವಾದ ವಾಯುಮಾರ್ಗದ ಮೂಲಕ ಹಾದು, ಮಿರುಗುವ ನಕ್ಷತ್ರಗಳಿಂದ ಆಚೆ ಹೋಗುತ್ತದೆ. ನಾವು ನೀರಿನಿಂದ ಮೇಲುಗಡೆಗೆ ಬಂದು ಭೂಮಿಯ ನೆಲವನ್ನೆಲ್ಲಾ ನೋಡುವ ಹಾಗೆ ಆ ಆತ್ಮವು ಕೂಡ ಮೇಲೆದ್ದು ಅದುವರೆಗೆ ಕಾಣದ ಕಾಂತಿಯುಕ್ತವಾದ ಪ್ರದೇಶಗಳನ್ನು ಕಾಣುತ್ತದೆ ಆದರೆ ನಾವು ಮಾತ್ರ ಅದನ್ನು ಕಾಣುವಂತಿಲ್ಲ" ಎಂದು ಆ ಅಜ್ಜಿ ಹೇಳಿದಳು

ಚಿಕ್ಕ ಮೀನಕನ್ಯೆ ಅದನ್ನು ಕೇಳಿ, ವ್ಯಸನದಿಂದ " ಆ ಶಾಶ್ವತವಾದ ಆತ್ಮ ನಮಗೆ ಮಾತ್ರ ಏಕೆ ಇಲ್ಲ ? ಹಾಗೆ ಒಂದು ದಿವಸವಾದರೂ ಮನುಷ್ಯ ಪ್ರಾಣಿಯಾಗಿ, ನಕ್ಷತ್ರಗಳ ಮೇಲಿನ ಸ್ವರ್ಲೋಕವನ್ನು ನೋಡಬಹುದಾದರೆ ಈ ನನ್ನ ಮುನ್ನೂರು ವರ್ಷಗಳ ಆಯುಷ್ಯವನ್ನೂ ನಾನು ಸಂತೋಷದಿಂದ ತ್ಯಾಗಮಾಡಿಯೇನು '' ಎಂದಳು.

" ಛೆ ಛೆ ! ನೀನು ಹೀಗೆಲ್ಲ ಯೋಚಿಸಬಾರದು. ಮನುಷ್ಯರಿಗಿಂತ ನಾವು ಅನೇಕ ವಿಧದಲ್ಲಿ ಹೆಚ್ಚು ಸುಖಿಗಳಾಗಿದ್ದೇವೆ, ಹೆಚ್ಚು ಭಾಗ್ಯಶಾಲಿಗಳಾಗಿದ್ದೇವೆ, ಎಂದು ನಾವು ತಿಳಿದುಕೊಂಡಿದ್ದೇವೆ '' ಎಂದಳು, ಆ ಅಜ್ಜಿ

"ಹಾಗಾದರೆ ಎಲ್ಲರಂತೆ ನಾನೂ ಸತ್ತು, ನೀರಿನ ಮೇಲಿನ ನೊರೆಯಾದರೆ ಪುನಃ ನಾನು ಅಲೆಗಳ ಗಾನವನ್ನು ಕೇಳುವಂತಿಲ್ಲ, ಸುಂದರವಾದ ಹೂಗಳನ್ನಾಗಲಿ ಕೆಂಪಗಿರುವ ಸೂರ್ಯನನ್ನಾಗಲಿ ನಾನು ಕಾಣುವಂತಿಲ್ಲ. ಅಜ್ಜಿ, ಶಾಶ್ವತವಾದ ಆತ್ಮವನ್ನು ಸಂಪಾದಿಸಬೇಕಾದರೆ ನಾನು ಏನು ಮಾಡಬೇಕು? ಹೇಳು, ಅಜ್ಜಿ" ಎಂದು ಆ ಮೀನಕನ್ಯೆ ಕೇಳಿದಳು

ಅದಕ್ಕೆ ಮುದುಕಿ "ಒಂದು ಮಾರ್ಗ ಉಂಟು. ಯಾವನಾದರೂ ಮನುಷ್ಯನು ತನ್ನ ತಾಯಿತಂದೆಗಿಂತ ಹೆಚ್ಚಾಗಿ ನಿನ್ನನ್ನು ಪ್ರೀತಿಸಿ, ಸದಾ ಮೂರುಹೊತ್ತೂ ನಿನ್ನನ್ನೇ ಕುರಿತು ಧ್ಯಾನಮಾಡಿದರೆ; ಪುರೋಹಿತನು ಅವನ ಬಲಗೈಯನ್ನು ನಿನ್ನ ಬಲಗೈಯಲ್ಲಿ ಇಟ್ಟಾಗ, ಅವನು ಇಹದಲ್ಲೂ ಪರದಲ್ಲೂ ನಿನ್ನನ್ನು ಒಬ್ಬಳನ್ನೇ ಪ್ರೀತಿಸುವೆನೆಂದು ಮನಃಪೂರ್ವಕವಾಗಿ ಮಾತು ಕೊಟ್ಟರೆ; ಆಗ ಅವನ ಆತ್ಮ ನಿನ್ನ ದೇಹದೊಳಕ್ಕೆ ಸರಿದು ಬಂದು, ನಿನಗೂ ಮನುಷ್ಯರ ಪರಲೋಕಸುಖದಲ್ಲಿ ಭಾಗ ದೊರಕುವುದು. ಆಗ ಅವನು ನಿನಗೆ ಒಂದು ಆತ್ಮವನ್ನು ಕೊಟ್ಟು, ತನ್ನ ಆತ್ಮವನ್ನೂ ಕಾಪಾಡಿಕೊಳ್ಳುವನು ಆದರೆ, ಮಗು, ಇದು ಆಗುವುದು ಸಾಧ್ಯವಿಲ್ಲ ನಿನ್ನ ಮೀನಿನ ಬಾಲವನ್ನು ನಾವು ಇಲ್ಲಿ ಸಮುದ್ರದ ಕೆಳಗಡೆ ಬಹು ಸುಂದರವೆಂದು ಭಾವಿಸಿದ್ದೇವೆ, ಆದರೂ ಭೂಮಿಯವರು ಅದನ್ನು ತುಂಬ ವಿರೂಪವೆಂದು ಎಣಿಸಿದ್ದಾರೆ. ಪಾಪ, ಅವರಿಗೇನು ಗೊತ್ತು! ಅವರ ದೃಷ್ಟಿಯಲ್ಲಿ ಸುಂದರವಾಗಿರಬೇಕಾದರೆ, ಅವರು ಕಾಲುಗಳೆಂದು ಕರೆಯುವ ಎರಡು ಕಂಬಗಳು ಪ್ರತಿಯೊಬ್ಬರಿಗೂ ಇರಬೇಕಂತೆ!" ಎಂದಳು.

ಚಿಕ್ಕ ಮೀನಕನ್ಯೆ ದುಃಖದಿಂದ ನಿಟ್ಟುಸಿರು ಬಿಟ್ಟು, ವ್ಯಸನದಿಂದ ತನ್ನ ಮೀನಿನ ಬಾಲವನ್ನು ನೋಡಿಕೊಂಡಳು. ಮುದುಕಿ "ನಾವು ನಮಗಿರುವ ಮುನ್ನೂರು ವರ್ಷಗಳೂ ಸುಖವಾಗಿರೋಣ, ನೀರಿನಲ್ಲಿ ನೆಗೆದು ನುಗ್ಗಿ ಕುಣಿದಾಡೋಣ. ಆಮೇಲೆ ಕುಳಿತು ವಿಶ್ರಾಂತಿ ಪಡೆಯೋಣ. ಈ ದಿನ ಸಂಜೆ ಅರಮನೆಯಲ್ಲಿ ನರ್ತನ ಏರ್ಪಾಟಾಗಿದೆ" ಎಂದಳು.

ಆ ರಾತ್ರಿ ಸಮುದ್ರದ ಅಡಿಯಲ್ಲಿ ಕಂಡುಬಂದ ದೃಶ್ಯಗಳಂಥವನು ಭೂಮಿಯ ಮೇಲೆ ನಾವು ಎಂದೂ ಕಾಣಲಾರೆವು. ಆ ವಿಶಾಲವಾದ ನರ್ತನ



ಚಿಕ್ಕ ಮೀನಕನ್ಯೆ ಮತ್ತು ಮಾಟಗಾತಿ

# ಚಿಕ್ಕ ಮೀನಕನ್ಯೆ

ಚಿಕ್ಕ ಮೀನಕನ್ಯೆ ತನ್ನ ಅಜ್ಜಿ ಕಾಣದ, ತನ್ನ ತಂದೆ ತಿಳಿಯದ, ತನ್ನ ಅಕ್ಕಂದಿರು ಅರಿಯದ, ತನ್ನ ಮೀನಮಾನವ ಲೋಕಕ್ಕೇ ಗೊತ್ತಿಲ್ಲದ ಅಪೂರ್ವವಾದ ಆತ್ಮದ ಹಂಬಲವನ್ನು ಕಟ್ಟಿಕೊಂಡು ತಾನೂ ಕಷ್ಟಪಟ್ಟಳು, ನಷ್ಟಪಟ್ಟಳು, ತನ್ನ ಬಂಧುಬಳಗವನ್ನೆಲ್ಲಾ ದುಃಖಕ್ಕೆ ಈಡುಮಾಡಿದಳು ಇಷ್ಟೆಲ್ಲಾ ಅನುಭವಿಸಿದುದರಿಂದ ಅವಳು ಏನು ಸಾಧಿಸಿದಳು? ಆತ್ಮ ಅವಳಿಗೆ ಲಭಿಸಿತೆ?

ಆತ್ಮ ಅಷ್ಟು ಸುಲಭವಾಗಿ ಲಭಿಸತಕ್ಕದ್ದಲ್ಲ. ಮೀನಕನ್ಯೆ ಇದನ್ನು ತಿಳಿದಿದ್ದುದರಿಂದಲೇ ನಿರಾಶೆಪಡಲಿಲ್ಲ. ಮುನ್ನೂರು ವರ್ಷಗಳು ಬದುಕಿ ಕೊನೆಗೆ ಸಮುದ್ರದ ನೊರೆಯಾಗಿ ಹೋಗುವ ಮೀನಕನ್ಯೆಯ ಜನ್ಮದಿಂದ, ತನ್ನ ತ್ಯಾಗ ಸಹಿಷ್ಣುತೆಗಳ ಫಲವಾಗಿ, ಅವಳು ಆತ್ಮವನ್ನು ಸಂಪಾದಿಸುವ ಸಾಮರ್ಥ್ಯವುಳ್ಳ ಆಕಾಶಕನ್ಯೆಯಾಗಲಿಲ್ಲವೆ? ಮೀನಕನ್ಯೆಯಾಗಿದ್ದಾಗ ಆತ್ಮವನ್ನು ಸಂಪಾದಿಸಲು ಪರರ ಕೈ ಕಾಯಬೇಕಾಗಿತ್ತು, ಆದರೆ ಆಕಾಶಕನ್ಯೆಯಾದ ಮೇಲೆ ಆತ್ಮವನ್ನು ಸಂಪಾದಿಸುವ ಸ್ವಾತಂತ್ರ್ಯ ತನ್ನ ಕೈಯಲ್ಲಿಯೇ ಕೂಡಿಬಂತು. ಎಂದ ಮೇಲೆ, ಮೀನಕನ್ಯೆ ಏನು ಸಾಧಿಸಿದಳು? ಆತ್ಮ ಲಭಿಸಿತೆ? ಎಂದು ಕೇಳಬಹುದೆ?

ಶಾಲೆಯ ಗೋಡೆಗಳೂ ಮೇಲುಛಾವಣಿಯೂ ನಿರ್ಮಲವಾದ ಸ್ಫಟಿಕದಿಂದ ಆಗಿತ್ತು. ಎರಡೂ ಕಡೆಗಳಲ್ಲಿ ನೂರಾರು ದೊಡ್ಡ ದೊಡ್ಡ ಮುತ್ತಿನ ಚಿಪ್ಪು ಗಳು ನಿಂತಿದ್ದುವು ಕೆಲವು ಇಟ್ಟಿಗೆಕೆಂಪು ಬಣ್ಣದುವು, ಕೆಲವು ಹುಲ್ಲು ಹಸಿರು ಬಣ್ಣದುವು. ಅವುಗಳ ಒಳಗೆ ಉರಿಯುತ್ತಿದ್ದ ನೀಲಿಯ ಬೆಂಕಿ ನರ್ತನಶಾಲೆಯನ್ನು ಬೆಳಗಿ, ಸ್ಫಟಿಕದ ಗೋಡೆಗಳ ಮೂಲಕವಾಗಿ ಹೊರಗಿನ ಸಮುದ್ರದ ನೀರಿಗೆ ರಂಗುಹಚ್ಚಿತ್ತು ಎಣಿಕೆಗೆ ಸಿಕ್ಕದಷ್ಟು ದೊಡ್ಡ ಮೀನು ಗಳೂ ಸಣ್ಣ ಮೀನುಗಳೂ ಆ ಸ್ಫಟಿಕದ ಗೋಡೆಗಳ ಪಕ್ಕದಲ್ಲಿ ಹಾಯ್ದು ಹೋದುವು ಕೆಲವು ಮೀನುಗಳ ಮೈಪೂರೆ ಕೆಂಪಗೆ ಹೊಳೆಯುತ್ತಿತ್ತು ಇನ್ನು ಕೆಲವುಗಳ ಮೈಪೂರೆ ಬೆಳ್ಳಿಯಂತೆಯೂ ಚಿನ್ನದಂತೆಯೂ ಮಿರುಗು ತ್ತಿತ್ತು ಒಳಗಿನ ಅಂಗಳಗಳಲ್ಲಿ ಒಂದು ವಿಶಾಲವಾದ ಹೊಳೆ ಹರಿಯುತ್ತಿತ್ತು, ಅದರೊಳಗೆ ಮೀನಮಾನವರೂ ಮೀನಕನ್ಯೆಯರೂ ತಾವೇ ಇಂಪಾಗಿ ಹಾಡಿ ಕೊಂಡು ಕುಣಿಯುತ್ತಿದ್ದರು. ಅವರ ಹಾಗೆ ಇಂಪಾಗಿ ಹಾಡತಕ್ಕವರು ಭೂಮಿಯ ಮೇಲೆ ಯಾರೂ ಇಲ್ಲ ಚಿಕ್ಕ ಮೀನಕನ್ಯೆ ಅವರೆಲ್ಲರಿಗಿಂತ ಮಧುರವಾಗಿ ಹಾಡಿದಳು ತುಂಬಿದ್ದ ಸಭೆಯೆಲ್ಲ ತಮ್ಮ ಕೈಗಳಿಂದಲೂ ಬಾಲಗಳಿಂದಲೂ ಚಪ್ಪಾಳೆ ಹೊಡೆದು ತಮ್ಮ ಮೆಚ್ಚಿಕೆಯನ್ನು ಸೂಚಿಸಿದರು. ಚಿಕ್ಕ ಮೀನಕನ್ಯೆ ಕೂಡ ಒಂದು ಕ್ಷಣಕಾಲ ಸುಮ್ಮಾನದಿಂದ ನಲಿದಳು; ತನಗಿರುವಷ್ಟು ಚೆಲುವಾದ ಕಂಠ ನೀರಲ್ಲಿಯಾಗಲಿ ನೆಲದಲ್ಲಿಯಾಗಲಿ ಬೇರೆ ಯಾರಿಗೂ ಇದ್ದಿಲ್ಲವೆಂಬುದು ಅವಳಿಗೂ ಗೊತ್ತಿತ್ತು. ಆದರೇನು, ಮರು ಕ್ಷಣದಲ್ಲಿ ತಮ್ಮ ಸಮುದ್ರದ ಮೇಲಿನ ಲೋಕವನ್ನು ಅವಳು ಜ್ಞಾಪಿಸಿ ಕೊಂಡಳು, ತಾನು ಕಂಡ ಆ ಮೋಹನ ರಾಜಕುಮಾರನನ್ನು ನೆನೆಸಿ ಕೊಂಡಳು, ಅವನಿಗಿದ್ದ ಹಾಗೆ ತನಗೂ ಒಂದು ಅಮರವಾದ ಆತ್ಮವಿಲ್ಲವಲ್ಲಾ ಎಂದು ವ್ಯಸನಗೊಂಡಳು. ಅದೇ ಕಾರಣದಿಂದ ಸದ್ದುಮಾಡದೆ ಅರಮನೆ ಯಿಂದ ಹೊರಗೆ ಬಂದಳು, ಅರಮನೆಯೊಳಗೆ ಸಂತೋಷ, ಗಾನ, ನರ್ತನ ಗಳು ನಡೆಯುತ್ತಿದ್ದರೆ ತಾನು ಮಾತ್ರ ದುಮ್ಮಾನದಿಂದ ಒಂಟಿಯಾಗಿ ತನ್ನ ಚಿಕ್ಕ ತೋಟದಲ್ಲಿ ಕುಳಿತುಕೊಂಡಳು. ಆಗ ತುತ್ತೂರಿಯನ್ನು ಊದಿದ ಶಬ್ದ ನೀರಿನ ಮೂಲಕವಾಗಿ ಅವಳ ಕಿವಿಗೆ ಬಿತ್ತು ಅದನ್ನು ಕೇಳಿ, "ನಾನು ಯಾರನ್ನು ಬಯಸುತ್ತಿರುವೆನೋ ಆ ರಾಜಕುಮಾರನು ಅಲ್ಲಿ ಹೋಗುತ್ತಿ

ದ್ದಾನೆ. ನನ್ನ ಜೀವನದ ಸರ್ವಸುಖವೂ ಯಾರ ಕೈಯಲ್ಲಿದೆಯೋ ಅವನು ಅಲ್ಲಿ ಹೋಗುತ್ತಿದ್ದಾನೆ. ಅವನಿಗೋಸ್ಕರ, ಅಮರವಾದ ಆತ್ಮವನ್ನು ಸಂಪಾದಿಸುವುದಕ್ಕೋಸ್ಕರ ನಾನು ಏನು ಬೇಕಾದರೂ ತ್ಯಾಗಮಾಡಲು ಸಿದ್ಧವಾಗಿದ್ದೇನೆ. ನನ್ನ ತಂದೆಯ ಅರಮನೆಯಲ್ಲಿ ನನ್ನ ಅಕ್ಕಂದಿರು ಇನ್ನೂ ನರ್ತನ ಮಾಡುತ್ತಿರುವಾಗಲೇ ನಾನು ಸಮುದ್ರದ ಮಾಟಗಾತಿಯ ಬಳಿಗೆ ಹೋಗಿ ಬರುತ್ತೇನೆ. ಅವಳನ್ನು ಕಂಡರೆ ನನಗೆ ಯಾವಾಗಿನಿಂದಲೂ ಹೆದರಿಕೆ. ಆದರೂ ಅವಳು ನನಗೇನಾದರೂ ಉಪಾಯ ಹೇಳಿಕೊಟ್ಟು, ಸಹಾಯಮಾಡಿಯಾಳು" ಎಂದು ಆ ಮೀನಕನ್ಯೆಯೆಂದುಕೊಂಡಳು

ಅನಂತರ ಮೀನಕನ್ಯೆ ತನ್ನ ತೋಟವನ್ನು ಬಿಟ್ಟು ಹೊರಟು ನೊರೆಗಟ್ಟಿದ ನೀರುಸುಳಿಗಳ ಮಾರ್ಗವಾಗಿ ಮಾಟಗಾತಿ ಇದ್ದ ಕಡೆಗೆ ಹೋದಳು. ಅವಳು ಆ ದಾರಿಯಲ್ಲಿ ಎಂದೂ ಹೋದವಳಲ್ಲ ಆ ದಾರಿಯಲ್ಲಿ ಹುಲ್ಲಿಲ್ಲ, ಹೂಗಳಿಲ್ಲ; ಬರಿಯ ಬೂದಿಬಣ್ಣದ ಮರಳಿನ ನೆಲ ಮಾತ್ರ ನೀರುಸುಳಿಗಳ ವರೆಗೂ ಚಾಚಿಕೊಂಡಿತ್ತು. ಅಲ್ಲಿ ನೀರು ನೊರೆನೊರೆಯಾಗಿ ಕುಂಬಾರನ ಚಕ್ರದ ಹಾಗೆ ತಿರುಗುತ್ತ, ಕೈಗೆ ಸಿಕ್ಕಿದ್ದನ್ನೆಲ್ಲ ಗಿರ್ರನೆ ಸುತ್ತಿಸಿ ಸಮುದ್ರದಡಿಯ ಅಂತರಾಳಕ್ಕೆ ಎಸೆಯುತ್ತಿತ್ತು. ಸಮುದ್ರದ ಮಾಟಗಾತಿಯ ವಾಸಸ್ಥಾನಕ್ಕೆ ಹೋಗಬೇಕಾದರೆ ಆ ಸುಳಿಗಳನ್ನು ದಾಟಿಯೇ ಹೋಗಬೇಕಾಗಿತ್ತು ಇದೂ ಅಲ್ಲದೆ, ದಾರಿಯಲ್ಲಿ ಬಹುದೂರದ ಉದ್ದಕ್ಕೂ ಕುತಕುತನೆ ಕುದಿಯುವ ಕರಿಯ ಕೆಸರನ್ನೂ ಹಾಯ್ದು ಹೋಗಬೇಕಾಗಿತ್ತು. ಅದರ ಆಚೆ ಒಂದು ವಿಚಿತ್ರವಾದ ಕಾಡಿನ ನಡುವೆ ಅವಳ ಮನೆ ಆ ಕಾಡಿನ ಮರಗಳು, ಹೂಗಳು ಎಲ್ಲಾ ಅರ್ಧ ಪ್ರಾಣಿ, ಅರ್ಧ ವೃಕ್ಷ. ಅವುಗಳನ್ನು ನೋಡಿದರೆ ಸಾವಿರ ಹೆಡೆಯ ಸರ್ಪಗಳು ನೆಲದಿಂದ ಬೆಳೆದುಕೊಂಡಹಾಗಿತ್ತು. ಉದ್ದವಾದ ಪಾಚಿಕಟ್ಟಿದ ತೋಳುಗಳೇ ಕೊಂಬೆಗಳು, ಬೆರಳುಗಳೋ ಬಾಗಿ ಬಳುಕುವ ಹುಳುಗಳ ಹಾಗಿದ್ದುವು; ಮರದ ಬುಡದಿಂದ ತುದಿಯವರೆಗೂ ಪ್ರತಿ ಅಂಗಾಂಗವೂ ಚಲಿಸುತ್ತಿತ್ತು. ಸಮುದ್ರದಲ್ಲಿ ಏನು ಸಿಕ್ಕಿದರೆ ಅದನ್ನು ಹಿಡಿದು, ಬಿಗಿಯಾಗಿ ಹಿಡಿದು, ಏನೇ ಆದರೂ ಅದನ್ನು ತಮ್ಮ ಮುಷ್ಟಿಯಿಂದ ಬಿಟ್ಟುಕೊಡುತ್ತಿರಲಿಲ್ಲ. ಚಿಕ್ಕ ಮೀನಕನ್ಯೆ ಇದನ್ನೆಲ್ಲ ಕಂಡು ದಿಗಿಲುಬಿದ್ದು,

ಭಯದಿಂದ ಅಲ್ಲಾಡದೆ ನಿಂತಳು. ಭಯದಿಂದ ಅವಳ ಎದೆ ಡವಡವ ಬಡಿಯಿತು ಇನ್ನೇನು ಅವಳು ಹಿಂದಿರುಗಿ ಓಡಿಹೋಗಬೇಕು, ಅಷ್ಟರಲ್ಲಿ ಆ ರಾಜಕುಮಾರನನ್ನೂ ತಾನು ಬಹುಕಾಲದಿಂದ ಬಯಸುತ್ತಿದ್ದ ಆತ್ಮವನ್ನೂ ಜ್ಞಾಪಿಸಿಕೊಂಡು, ಪುನಃ ಧೈರ್ಯಗೊಂಡಳು. ತನ್ನ ಉದ್ದವಾದ ಅಲೆಗೂದಲನ್ನು ತಲೆಯ ಸುತ್ತಲೂ ಬಿಗಿದು, ಆ ಪ್ರಾಣಿವೃಕ್ಷಗಳ ಕೈಗೆ ಸಿಕ್ಕದಹಾಗೆ ಕಟ್ಟಿದಳು. ತನ್ನ ಎರಡು ತೋಳುಗಳನ್ನೂ ಎದೆಯ ಮೇಲೆ ಅವಚಿ ನೀರಿನಲ್ಲಿ ಮೀನು ನುಗ್ಗುವಂತೆ ನುಗ್ಗಿದಳು, ಆಕಡೆ ಈಕಡೆ ಚಾಚಿ ನಿಂತಿದ್ದ ಆ ಪ್ರಾಣಿವೃಕ್ಷಗಳ ತೋಳುಬೆರಳುಗಳ ನಡುವೆ ನುಣುಚಿಕೊಂಡು ಹೋದಳು. ಅವುಗಳ ನೂರಾರು ತೋಳುಗಳ ಹಿಡಿತದಲ್ಲಿ ಏನೇನೋ ಸಿಕ್ಕಿಕೊಂಡಿದ್ದುದನ್ನು ಕಂಡಳು. ಸಮುದ್ರದಲ್ಲಿ ಜೀವ ಕಳೆದುಕೊಂಡವರ ಬಿಳಿಯ ಅಸ್ಥಿಪಂಜರಗಳೂ, ಸಮುದ್ರದಲ್ಲಿ ಮುಳುಗಿಹೋದ ಪ್ರಾಣಿಗಳೂ, ದೋಣಿ ಹುಟ್ಟುಗಳೂ, ಹಡಗಿನ ಪೆಟ್ಟಿಗೆಗಳೂ ಅವುಗಳ ತೋಳಿನ ಸೆರೆಯಲ್ಲಿ ಬಲವಾಗಿ ಸಿಕ್ಕಿಕೊಂಡಿದ್ದುದನ್ನು ಕಂಡಳು. ಆದರೆ ಅವುಗಳೆಲ್ಲಕ್ಕಿಂತ, ಚಿಕ್ಕ ಮೀನಕನ್ಯೆಯೊಬ್ಬಳನ್ನು ಆ ಪ್ರಾಣಿವೃಕ್ಷಗಳು ಹಿಡಿದು ಹಿಸುಕಿಹಾಕಿದ್ದ ದೃಶ್ಯ ಮಾತ್ರ ಆ ಸಮುದ್ರ ರಾಜಕುಮಾರಿಗೆ ಬಹಳ ಭಯೋತ್ಪಾದಕವಾಗಿತ್ತು

ಸಮುದ್ರರಾಜಕುಮಾರಿ ಕಾಡಿನ ಹತ್ತಿರವಿದ್ದ ಜೌಗುನೆಲದ ಬಳಿಗೆ ಬಂದಳು. ಅಲ್ಲಿ ದೊಡ್ಡದಾಗಿ ಕೊಬ್ಬಿದ್ದ ನೀರುಹಾವುಗಳು ತಮ್ಮ ವಿರೂಪವಾದ ಮೈಗಳನ್ನು ಬಿಟ್ಟುಕೊಂಡು ಕೆಸರಿನಲ್ಲಿ ಒದ್ದಾಡುತ್ತಿದ್ದುವು. ಇಂಥ ಪ್ರದೇಶದ ನಡುವೆ, ಮುಳುಗಿ ಸತ್ತ ಮನುಷ್ಯರ ಮೂಳೆಗಳಿಂದ ಮಾಡಿದ ಒಂದು ಮನೆಯಿತ್ತು. ಅಲ್ಲಿ, ಜನರು ಗಿಳಿಗಳಿಗೆ ಕೆಲವು ವೇಳೆ ಕಲ್ಲುಸಕ್ಕರೆ ತಿನ್ನಿಸುವ ಹಾಗೆ ತನ್ನ ಬಾಯಿಂದ ಒಂದು ಕಪ್ಪೆಗೆ ತಿಂಡಿ ತಿನ್ನಿಸುತ್ತ ಆ ಮಾಟಗಾತಿ ಕುಳಿತಿದ್ದಳು. ಅವಳು ಅಲ್ಲಿದ್ದ ಅಸಹ್ಯದ ನೀರುಹಾವುಗಳನ್ನು ತನ್ನ ಕೋಳಿಪಿಳ್ಳೆಗಳೆಂದು ಕರೆಯುತ್ತಿದ್ದಳು, ಅವು ಬಂದು ಅವಳ ಮೈಮೇಲೆಲ್ಲ ಹರಿದಾಡುತ್ತಿದ್ದುವು.

ಮಾಟಗಾತಿ ಚಿಕ್ಕ ಮೀನಕನ್ಯೆಯನ್ನು ಕಂಡು, “ನಿನಗೆ ಏನು ಬೇಕೆಂಬುದು ನನಗೆ ಗೊತ್ತು. ನಿನಗೆ ಬುದ್ಧಿಯಿಲ್ಲ. ಆದರೂ ನಿನ್ನ ಹಟ

ನೀನು ಬಿಡುವುದಿಲ್ಲ. ಅದರಿಂದ ನಿನಗೆ ತುಂಬ ದುಃಖವುಂಟಾಗುತ್ತದೆ. ನೀನು ನಿನ್ನ ಮೀನಿನ ಬಾಲವನ್ನು ಕಳೆದುಕೊಂಡು, ಅದಕ್ಕೆ ಬದಲಾಗಿ ಭೂಲೋಕದ ಮನುಷ್ಯರ ಹಾಗೆ ಎರಡು ಕಂಬಗಳನ್ನು ಪಡೆಯಬೇಕೆಂದುಕೊಂಡಿದ್ದೀಯೆ ಅದರಿಂದ ಆ ರಾಜಕುಮಾರನು ನಿನ್ನನ್ನು ಪ್ರೀತಿಸುವನೆಂದೂ ನಿನಗೆ ಅಮರವಾದ ಆತ್ಮ ದೊರಕುವುದೆಂದೂ ತಿಳಿದುಕೊಂಡಿದ್ದೀಯೆ" ಎಂದು ಗಟ್ಟಿಯಾಗಿ ನಕ್ಕಳು ಅವಳ ನಗು ಎಷ್ಟು ಅಸಹ್ಯಕರವಾಗಿತ್ತೆಂದರೆ, ಅವಳ ಮೈಮೇಲಿದ್ದ ಕಪ್ಪೆಯೂ ಹಾವುಗಳೂ ಬೆಚ್ಚಿ ನೆಲಕ್ಕೆ ಬಿದ್ದು ಅಲ್ಲೇ ಒದ್ದಾಡುತ್ತ ನಿಂತವು. "ನೀನೂ ಸರಿಯಾದ ಕಾಲಕ್ಕೆ ಬಂದೆ. ನಾಳೆ ಬೆಳಗ್ಗೆ ಸೂರ್ಯೋದಯವಾದ ಮೇಲೆ ಬಂದಿದ್ದರೆ ಇನ್ನೊಂದು ವರ್ಷ ಮುಗಿಯುವವರೆಗೂ ನಾನೇನೂ ಸಹಾಯಮಾಡುವಂತಿರಲಿಲ್ಲ ನಿನಗೆ ಒಂದು ಕಷಾಯ ಮಾಡಿಕೊಡುತ್ತೇನೆ, ನೀನು ಅದನ್ನು ತೆಗೆದುಕೊಂಡು, ನಾಳೆ ಸೂರ್ಯ ಹುಟ್ಟುವುದಕ್ಕೆ ಮುಂಚೆ ನೆಲದ ಮೇಲೆ ಹೋಗಿ, ಸಮುದ್ರತೀರದಲ್ಲಿ ಕುಳಿತು ಅದನ್ನು ಕುಡಿ ಆಗ ನಿನ್ನ ಮೀನಿನ ಬಾಲ ಮಾಯವಾಗಿ, ಮನುಷ್ಯರು ಕಾಲು ಎನ್ನುತ್ತಾರಲ್ಲಾ ಅದು ನಿನಗೆ ಉಂಟಾಗುತ್ತದೆ ಆಗ ದೇಹದಲ್ಲಿ ಹರಿತವಾದ ಕತ್ತಿಯನ್ನು ಚುಚ್ಚಿದಷ್ಟು ಘೋರವಾದ ನೋವಾಗುತ್ತದೆ. ಆದರೆ ಮಾತ್ರ, ನಿನ್ನನ್ನು ನೋಡಿದವರೆಲ್ಲಾ ನೀನೇ ಜಗತ್ತಿನಲ್ಲಿ ಪರಮಸುಂದರಿಯೆಂದು ಹೇಳುತ್ತಾರೆ. ಆಗಲೂ ನೀನು ಈಗ ನೀರಿನಲ್ಲಿ ತೇಲುವಂತೆಯೇ ಲಲಿತವಾಗಿ ಚಲಿಸುತ್ತೀಯೆ; ಯಾವ ನರ್ತಕಿಯೂ ನರ್ತಕನೂ ನಿನ್ನಂತೆ ನರ್ತಿಸಲಾರರು, ಆದರೆ ಮಾತ್ರ, ನೀನು ಪ್ರತಿಸಲ ಹೆಜ್ಜೆ ಊರಿದಾಗಲೂ ಹರಿತವಾದ ಚಾಕುಗಳನ್ನು ತುಳಿದಂತೆ, ಇನ್ನೇನು ರಕ್ತವೇ ಬಸಿದುಬರುವುದೋ ಎಂಬಂತೆ, ನಿನಗೆ ಅನುಭವವಾಗುವುದು. ನೀನು ಇದನ್ನೆಲ್ಲಾ ಸಹಿಸಲು ಒಪ್ಪಿದರೆ, ನಾನು ನಿನಗೆ ಸಹಾಯಮಾಡುತ್ತೇನೆ" ಎಂದು ಆ ಮಾಟಗಾತಿ ಹೇಳಿದಳು.

ಸಮುದ್ರರಾಜಕುಮಾರಿ ಆ ರಾಜಕುಮಾರನನ್ನೂ ಅಮರವಾದ ಆತ್ಮವನ್ನೂ ನೆನಪುಮಾಡಿಕೊಂಡು, ನಡುಗುವ ದನಿಯಲ್ಲಿ "ಆಗಲಿ, ನಾನು ಒಪ್ಪುತ್ತೇನೆ" ಎಂದಳು.

ಅದಕ್ಕೆ ಮಾಟಗಾತಿ "ಆದರೆ ಪುನಃ ಯೋಚಿಸಿ ನೋಡು ನಿನ್ನ ಆಕಾರ ಮನುಷ್ಯರ ಹಾಗೆ ಆಗಿಬಿಟ್ಟಮೇಲೆ ನೀನು ಮತ್ತೆಮ್ಮೆ ಮೀನಕನ್ಯೆ ಆಗಲಾರೆ, ನೀರಿನ ಮೂಲಕವಾಗಿ ನಿನ್ನ ಅಕ್ಕಂದಿರ ಬಳಿಗಾಗಲಿ ನಿನ್ನ ತಂದೆಯ ಅರಮನೆಗಾಗಲಿ ಪುನಃ ಹಿಂದಿರುಗಲಾರೆ. ನೀನು ರಾಜಕುಮಾರನ ಪ್ರೇಮವನ್ನು ಸಂಪಾದಿಸಲು ಆಗದಿದ್ದರೆ, ಅವನು ನಿನಗೋಸ್ಕರ ತನ್ನ ತಾಯಿ ತಂದೆಯನ್ನೂ ಮರೆಯಲು ಇಷ್ಟಪಡದಿದ್ದರೆ, ನಿನ್ನನ್ನು ಸರ್ವಾತ್ಮನಾ ಪ್ರೀತಿಸಿ ಪುರೋಹಿತನ ಎದುರಿನಲ್ಲಿ ನಿನ್ನ ಪಾಣಿಗ್ರಹಣವಾಗದಿದ್ದರೆ, ನೀನು ಅಮರ ವಾದ ಆತ್ಮವನ್ನು ಎಂದಿಗೂ ಪಡೆಯಲಾರೆ ಅವನು ಬೇರೊಬ್ಬಳನ್ನು ಮದುವೆಯಾದ ಮಾರನೆಯ ಪ್ರಾತಃಕಾಲವೇ ನೀನು ಸಮುದ್ರದ ಅಲೆಗಳ ತುದಿಯಲ್ಲಿ ತೇಲುವ ನೊರೆಯಾಗಿ ಹೋಗುವೆ ' ಎಂದಳು.

ಮೀನಕನ್ಯೆಯ ಮುಖದಲ್ಲಿ ರಕ್ತ ಇಂಗಿಹೋಯಿತು. ' ನಾನು ಇದನ್ನು ಮಾಡಿಯೇ ತೀರುತ್ತೇನೆ '' ಎಂದಳು.

'' ಆದರೆ ನನಗೂ ನನ್ನ ಬೆಲೆ ಕೊಡಬೇಕು. ನಾನು ಕೇಳುವ ಬೆಲೆ ಯೇನೂ ಅಲ್ಪವಾದುದಲ್ಲ. ಸಮುದ್ರದ ಅಡಿಯಲ್ಲಿ ಇರುವವರೆಲ್ಲರ ಕಂಠ ಕ್ಕಿಂತಲೂ ನಿನ್ನ ಕಂಠ ತುಂಬ ಇಂಪಾಗಿದೆ. ಆ ಕಂಠಸ್ವರದಿಂದ ರಾಜ ಕುಮಾರನನ್ನು ಮೋಹಗೊಳಿಸಬಹುದೆಂದು ನೀನು ನಂಬಿದ್ದೀಯೆ. ಆದರೆ ನಿನ್ನ ಈ ಕಂಠಸ್ವರವನ್ನು ನೀನು ನನಗೆ ಬೆಲೆಯಾಗಿ ಕೊಡಬೇಕು. ನಿನ್ನ ಬಳಿ ಇರುವ ಅತ್ಯಮೂಲ್ಯವಾದ ವಸ್ತುವನ್ನು ಕೊಟ್ಟರೆ ಮಾತ್ರ ನಾನು ನನ್ನ ಕಷಾಯವನ್ನು ನಿನಗೆ ಕೊಟ್ಟೇನು ಆ ಕಷಾಯದ ಗುಣ ಎರಡು ಬಾಯಿನ ಖಡ್ಗದ ಹಾಗೆ ತೀವ್ರವಾಗಿರಬೇಕಾದರೆ ಅದರಲ್ಲಿ ನನ್ನ ದೇಹದ ರಕ್ತವನ್ನು ನಾನು ಬೆರಸಬೇಕು" ಎಂದು ಆ ಮಾಟಗಾತಿ ಹೇಳಿದಳು.

"ಆದರೆ, ನೀನು ನನ್ನ ಕಂಠಸ್ವರವನ್ನು ಕಿತ್ತುಕೊಂಡುಬಿಟ್ಟರೆ ನನಗೆ ಉಳಿಯುವುದು ಏನು ?'' ಎಂದು ಮೀನಕನ್ಯೆ ಕೇಳಿದಳು.

"ನಿನ್ನ ಸುಂದರವಾದ ರೂಪು, ನಿನ್ನ ಲಲಿತವಾದ ನಡಿಗೆ, ನಿನ್ನ ಭಾವ ಪೂರ್ಣವಾದ ಕಣ್ಣು, ಇವುಗಳಿಂದ ನೀನು ಯಾವ ಮನುಷ್ಯನ ಹೃದಯ

ವನ್ನಾದರೂ ವಶಪಡಿಸಿಕೊಳ್ಳಬಲ್ಲೆ. ಏಕೆ, ಧೈರ್ಯ ನಷ್ಟವಾಯಿತೇನು? ಎಲ್ಲಿ, ನಾಲಿಗೆ ನೀಡು; ಕತ್ತರಿಸಿಕೊಳ್ಳೋಣ. ಆಮೇಲೆ ನಿನಗೆ ಕಷಾಯ ಕೊಡುತ್ತೇನೆ'' ಎಂದು ಮಾಟಗಾತಿಯೆಂದಳು.

"ಹಾಗೆಯೆ ಆಗಲಿ" ಎಂದು ಮೀನಕನ್ಯೆ ಹೇಳಿದಳು.

ಮಾಟಗಾತಿ ಕಷಾಯವನ್ನು ಸಿದ್ಧಗೊಳಿಸುವುದಕ್ಕಾಗಿ ಬೆಂಕಿಯ ಮೇಲೆ ಒಂದು ದೊಡ್ಡ ಕಡಾಯಿ ಇಟ್ಟಳು. "ಶುಚಿಯಾಗಿದ್ದರೆ ಒಳ್ಳೆಯದು'' ಎಂದು ಹೇಳುತ್ತ, ಅವಳು ಹಾವುಗಳನ್ನು ಗಂಟುಕಟ್ಟಿ, ಅದರಿಂದ ಪಾತ್ರೆಯ ಒಳಭಾಗವನ್ನು ಒರಸಿದಳು. ಬಳಿಕ ತನ್ನ ಎದೆಯನ್ನು ಚುಚ್ಚಿಕೊಂಡು, ಆ ಗಾಯದಿಂದ ಕಪ್ಪುರಕ್ತವನ್ನು ಪಾತ್ರೆಗೆ ಬೀಳಿಸಿದಳು. ಪಾತ್ರೆಯ ಒಳಗಿನಿಂದ ಮೇಲೆದ್ದ ಹಬೆ ಅನೇಕ ಭಯಂಕರವಾದ ಆಕಾರಗಳನ್ನು ತಾಳಿ, ನೋಡಿದರೆ ಹೆದರಿಕೆಯಾಗುತ್ತಿತ್ತು. ಒಂದೊಂದು ಗಳಿಗೆಗೂ ಆ ಮಾಟಗಾತಿ ಏನೇನೋ ಪದಾರ್ಥಗಳನ್ನು ಆ ಪಾತ್ರೆಗೆ ಹಾಕಿದಳು. ಅದು ಕುದಿಯಲು ತೊಡಗಿದಾಗ ಆದ ಶಬ್ದ ಮೊಸಳೆ ಅತ್ತಹಾಗಿತ್ತು. ಕಟ್ಟಕಡೆಗೆ, ಆ ಮಂತ್ರ ಕಷಾಯ ಸಿದ್ಧವಾದಾಗ, ಅದು ತಿಳಿನೀರಿನಷ್ಟು ಸ್ವಚ್ಛವಾಗಿತ್ತು. "ಇದೊ, ಸಿದ್ಧವಾಗಿದೆ" ಎಂದು ಮಾಟಗಾತಿ ಆ ಮೀನಕನ್ಯೆಯ ನಾಲಿಗೆಯನ್ನು ಕತ್ತರಿಸಿಕೊಂಡಳು. ಮೀನಕನ್ಯೆ ಮೂಗಳಾದಳು, ಇನ್ನೆಂದಿಗೂ ಅವಳು ಮಾತಾಡುವಂತಿರಲಿಲ್ಲ, ಹಾಡುವಂತಿರಲಿಲ್ಲ.

"ನೀನು ಕಾಡಿನ ಮಾರ್ಗವಾಗಿ ಹಿಂದಿರುಗಿ ಹೋಗುವಾಗ ವೃಕ್ಷಪ್ರಾಣಿಗಳು ಏನಾದರೂ ನಿನ್ನನ್ನು ಹಿಡಿದುಕೊಳ್ಳುವುದಾದರೆ, ಈ ಕಷಾಯದ ಎರಡು ಹನಿ ಅವುಗಳ ಮೇಲೆ ಚಿಮುಕಿಸು. ಅವುಗಳ ಕೈಬೆರಳುಗಳು ಸಾವಿರ ಸೀಳಾಗಿ ಹೋಗುವುವು" ಎಂದು ಆ ಮಾಟಗಾತಿಯೆಂದಳು. ಆದರೆ ಆ ವೃಕ್ಷಪ್ರಾಣಿಗಳು ಅವಳ ಕೈಯ ಕಷಾಯವನ್ನು ಕಂಡ ಒಡನೆಯೆ ಭೀತಿಯಿಂದ ಹಿಂದೆ ಸರಿದು ದಾರಿ ಬಿಟ್ಟುಕೊಟ್ಟ ಕಾರಣ ಮೀನಕನ್ಯೆ ಕಷಾಯವನ್ನು ಚಿಮುಕಿಸ ಬೇಕಾದ ಅವಶ್ಯಕತೆಯುಂಟಾಗಲಿಲ್ಲ. ಅವಳ ಕೈಯಲ್ಲಿ ಆ ಕಷಾಯ ನಕ್ಷತ್ರದ ಹಾಗೆ ಮಿನುಗುತ್ತಿತ್ತು.

ಹೀಗೆ ಆ ಮೀನಕನ್ಯೆ ಕಾಡನ್ನೂ ಜೌಗುನೆಲವನ್ನೂ ದಾಟಿಕೊಂಡು ನೊರೆಯುವ ಸುಳಿಗಳ ನಡುವೆ ಬೇಗಬೇಗ ನುಸುಳಿಕೊಂಡು ಹೋದಳು ಅವಳು ತನ್ನ ತಂದೆಯ ಅರಮನೆಗೆ ಬರುವ ವೇಳೆಗೆ ನೃತ್ಯಶಾಲೆಯ ಪಂಜುಗಳನ್ನೆಲ್ಲ ನಂದಿಸಿದ್ದರು, ಒಳಗೆ ಎಲ್ಲರೂ ನಿದ್ರೆಮಾಡಿದ್ದರು. ಆದರೆ ಈಗ ತಾನು ಮೂಗಿಯಾಗಿ ಅವರನ್ನು ತೊರೆದು ಹೋಗುತ್ತಿದ್ದಳಾದ ಕಾರಣ ಅವಳಿಗೆ ಒಳಗೆ ಹೋಗುವ ಧೈರ್ಯ ಬರಲಿಲ್ಲ, ಎದೆಯೊಡೆದ ಹಾಗೆ ವೇದನೆಯಾಯಿತು. ತೋಟದೊಳಕ್ಕೆ ಕದ್ದುಹೋಗಿ, ತನ್ನ ಅಕ್ಕಂದಿರ ಪಾತಿಯಿಂದ ಒಂದೊಂದು ಹೂವನ್ನು ಕುಯ್ದು, ಅರಮನೆಯ ಕಡೆಗೆ ಸಾವಿರಾರು ಸಲ ಮುತ್ತುಕೊಟ್ಟು, ಆ ಮೀನಕನ್ಯೆ ಸಮುದ್ರದ ಕರಿನೀಲಿಯ ನೀರನ್ನು ಭೇದಿಸಿಕೊಂಡು ಮೇಲೆದ್ದಳು. ಅವಳು ರಾಜಕುಮಾರನ ಅರಮನೆಯ ಹತ್ತಿರ ಬಂದು, ಅದರ ಸುಂದರವಾದ ಅಮೃತಶಿಲೆಯ ಸೋಪಾನಗಳನ್ನು ಮುಟ್ಟಿದಾಗ ಸೂರ್ಯ ಇನ್ನೂ ಎದ್ದಿರಲಿಲ್ಲ, ಚಂದ್ರ ಮಾತ್ರ ಸ್ವಚ್ಛವಾಗಿ ಬೆಳಗುತ್ತಿದ್ದ. ಮೀನಕನ್ಯೆ ಆಗ ತಾನು ತಂದ ಮಂತ್ರಕಷಾಯವನ್ನು ಕುಡಿದಳು, ಹರಿತವಾದ ಎರಡುಬಾಯಿನ ಖಡ್ಗವು ತನ್ನ ಕೋಮಲವಾದ ದೇಹವನ್ನು ಸೀಳಿದಂತೆ ಅವಳಿಗೆ ವೇದನೆಯಾಯಿತು, ಅವಳು ಮೂರ್ಛೆಹೋಗಿ, ಸತ್ತ ಹಾಗೆ ನೆಲದ ಮೇಲೆ ಬಿದ್ದಳು.

ಸೂರ್ಯನು ಉದಯಿಸಿ ಸಮುದ್ರದ ಮೇಲೆ ಪ್ರಕಾಶಿಸಿದಾಗ ಅವಳು ಚೇತರಿಸಿಕೊಂಡಳು. ದೇಹದಲ್ಲಿ ನೋವು ತೀವ್ರವಾಗಿತ್ತು. ಆದರೆ ಆ ಸುಂದರನಾದ ರಾಜಕುಮಾರನು ಅವಳ ಎದುರಿನಲ್ಲಿ ಬಂದು ನಿಂತಿದ್ದನು. ಅವನು ತನ್ನ ಕಾಡಿಗೆಕಪ್ಪು ಕಣ್ಣುಗಳಿಂದ ತನ್ನನ್ನೇ ದೃಷ್ಟಿಸುವುದನ್ನು ನೋಡಿ ಅವಳು ಲಜ್ಜೆಯಿಂದ ತಲೆ ತಗ್ಗಿಸಿದಳು. ಆಗ, ತನ್ನ ಮೀನಿನ ಬಾಲ ಮಾಯವಾಗಿ, ಅದರ ಬದಲು ಚಿಕ್ಕ ಕನ್ಯೆಯರಿಗೆ ಇರುವ ಹಾಗೆಯೇ ತನಗೂ ಒಂದು ಜೊತೆ ಬಿಳಿಯ ಕಾಲುಗಳೂ ಪುಟಾಣಿ ಪಾದಗಳೂ ಇದ್ದುದು ಅವಳಿಗೆ ಗೋಚರವಾಯಿತು. ತನ್ನ ಮೈಮೇಲೆ ಏನೂ ಬಟ್ಟೆ ಇಲ್ಲದ್ದರಿಂದ ತನ್ನ ಉದ್ದವಾದ, ದಟ್ಟವಾದ ತಲೆಗೂದಲಿನಿಂದ ಮೈ ಮುಚ್ಚಿಕೊಂಡಳು. 'ನೀನು ಯಾರು? ಎಲ್ಲಿಂದ ಬಂದೆ?' ಎಂದು ರಾಜಕುಮಾರನು ಪ್ರಶ್ನಿಸಿ

ದಾಗ ಅವಳು ತನ್ನ ಕರಿನೀಲಿಯ ಕಣ್ಣುಗಳನ್ನು ಮೇಲೆತ್ತಿ ದುಃಖದಿಂದ ಮೃದುವಾಗಿ ನೋಡಿದಳೇ ಹೊರತು ಉತ್ತರ ಕೊಡಲಾಗಲಿಲ್ಲ ಆಗ ಅವನು ಅವಳ ಕೈಹಿಡಿದುಕೊಂಡು ಅವಳನ್ನು ಅರಮನೆಗೆ ಕರೆದುಕೊಂಡು ಹೋದನು. ಒಂದೊಂದು ಹೆಜ್ಜೆ ಊರಿದಾಗಲೂ ಆ ಮಾಟಗಾತಿ ಹೇಳಿದ ಹಾಗೆಯೇ ಅಮಿತವಾದ ನೋವಾಗುತ್ತಿತ್ತು; ಸೂಜಿಗಳ ತುದಿಯ ಮೇಲೋ ಹರಿತವಾದ ಚೂರಿಗಳ ಮೇಲೋ ಕಾಲು ಊರಿದಹಾಗಾಗುತ್ತಿತ್ತು. ಆದರೆ ಆ ಮೀನಕನ್ಯೆ ಅದೆಲ್ಲವನ್ನೂ ಇಷ್ಟಪಟ್ಟು ಸಹಿಸಿಕೊಂಡು, ಸಾಬೂನಿನ ಗುಳ್ಳೆಯಷ್ಟು ಹಗುರವಾಗಿ ಆ ರಾಜಕುಮಾರನ ಪಕ್ಕದಲ್ಲಿ ನಡೆದು ಹೋದಳು ಅವಳು ಲಲಿತವಾಗಿ ಬಳುಕುತ್ತ ನಡೆಯುವುದನ್ನು ಕಂಡವರೆಲ್ಲ ಆಶ್ಚರ್ಯಪಟ್ಟರು. ಬಹುಬೇಗನೆ ಅನರ್ಘ್ಯವಾದ ವಸ್ತ್ರಗಳಿಂದ ಅವಳನ್ನು ಅಲಂಕರಿಸಿದರು ಇಡೀ ಅರಮನೆಯಲ್ಲಿ ಅವಳಷ್ಟು ಸುಂದರಿಯಾದವಳು ಬೇರೆ ಯಾರೂ ಇರದಿದ್ದರೂ ಅವಳು ಮೂಗಿಯಾಗಿ, ಮಾತಾಡುವಂತಿರಲಿಲ್ಲ, ಹಾಡುವಂತಿರಲಿಲ್ಲ.

ಸುಂದರಿಯರಾದ ಸೇವಕಿಯರು ರೇಶಿಮೆ ಉಟ್ಟು ಚಿನ್ನ ತೊಟ್ಟು ಮುಂದೆ ಬಂದು ರಾಜಕುಮಾರನೆದುರಿಗೂ ಅವನ ತಾಯಿತಂದೆಯ ಎದುರಿಗೂ ಹಾಡಿದರು. ಒಬ್ಬಳಂತೂ ಉಳಿದವರಿಗಿಂತ ಉತ್ತಮವಾಗಿ ಹಾಡಿದಾಗ ರಾಜಕುಮಾರನು ಚಪ್ಪಾಳೆ ತಟ್ಟಿ, ಅವಳ ಕಡೆಗೆ ಮಂದಹಾಸ ಬೀರಿದ. ಚಿಕ್ಕ ಮೀನಕನ್ಯೆ ತುಂಬ ವ್ಯಸನಪಟ್ಟಳು. ತಾನು ಇನ್ನೂ ಎಷ್ಟು ಇಂಪಾಗಿ ಹಾಡುತ್ತಿದ್ದೆನೆಂಬುದನ್ನು ನೆನೆದು, "ಅಯ್ಯೋ! ಇವನ ಜೊತೆಯಲ್ಲಿ ಇರುವುದಕ್ಕೋಸ್ಕರವಾಗಿ ನಾನು ನನ್ನ ಕಂಠಸ್ವರವನ್ನು ತ್ಯಾಗಮಾಡಿದೆನೆಂದು ಇವನಿಗೆ ತಿಳಿದರೆ!" ಎಂದುಕೊಂಡಳು

ಅನಂತರ ಸೇವಕಿಯರು ಕೆಲವು ಚೆಲುವಾದ ಕಿನ್ನರ ನೃತ್ಯಗಳನ್ನು ಕುಣಿದರು. ಸುಂದರವಾದ ಸಂಗೀತ ಜೊತೆಗೆ ಮೇಳವಾಗಿತ್ತು. ಆಗ ಚಿಕ್ಕ ಮೀನಕನ್ಯೆ ತನ್ನ ಮನೋಹರವಾದ ಬಿಳಿಯ ತೋಳುಗಳನ್ನು ಮೇಲೆ ನೀಡಿ, ಉಂಗುಟಗಳ ತುದಿಯಲ್ಲಿ ನಿಂತು, ನೆಲದ ಮೇಲೆ ತೇಲಿ, ಅದುವರೆಗೆ ಯಾರೂ ಕುಣಿಯದಿದ್ದ ಹಾಗೆ ಅಪೂರ್ವವಾಗಿ ಕುಣಿದಳು. ಪ್ರತಿಕ್ಷಣದಲ್ಲೂ ಅವಳ

ಸೌಂದರ್ಯ ಹೆಚ್ಚು ಹೆಚ್ಚು ವ್ಯಕ್ತವಾಯಿತು. ಇತರ ಸೇವಕಿಯರ ಗಾನ ಕ್ಕಿಂತಲೂ ಆ ಮೀನಕನ್ಯೆಯ ಕಣ್ಣಿನ ನೋಟವೇ ಹೆಚ್ಚು ಹೃದಯಂಗಮ ವಾಗಿತ್ತು. ಅವಳ ನೃತ್ಯ ಎಲ್ಲರಿಗೂ ಮೋಹಕವಾಗಿತ್ತು. ರಾಜಕುಮಾರನಿ ಗಂತೂ ಹೇಳತೀರದು ಅವಳಂತೂ ಪ್ರತಿಸಲ ನೆಲ ಮುಟ್ಟಿದಾಗಲೂ ಹರಿತ ವಾದ ಚೂರಿಗಳನ್ನು ತುಳಿದಂತೆ ಆಗುತ್ತಿದ್ದರೂ, ಅವನ ಸಂತೋಷಕ್ಕೋಸ್ಕರ ಇಷ್ಟಪಟ್ಟು ಪುನಃ ಪುನಃ ನರ್ತಿಸಿದಳು.

ಅವಳು ಸದಾ ತನ್ನ ಸಂಗಡವೇ ಇರಬೇಕೆಂದು ರಾಜಕುಮಾರನು ಹೇಳಿದನು ಅವಳು ಮೊಕಮಲ್ಲಿನ ದಿಂಬಿನ ಮೇಲೆ ಅವನ ಕೊಠಡಿಯ ಬಾಗಿಲಿನಲ್ಲಿ ಮಲಗಲು ಅವಳಿಗೆ ಅಪ್ಪಣೆಯಾಯಿತು. ತಾನು ಕುದುರೆ ಸವಾರಿ ಹೊರಟಾಗ ಅವಳೂ ತನ್ನ ಹಿಂದೆ ಬರಲಿ ಎಂದು ರಾಜಕುಮಾರನು ಅವಳಿಗೆ ಬಾಲಸೇವಕನ ಗಂಡುಡುಪನ್ನು ಹೊಲಿಸಿಕೊಟ್ಟನು. ಸುವಾಸನೆ ತುಂಬಿದ ಕಾಡುಗಳಲ್ಲಿ, ಹಸಿರು ಕೊಂಬೆಗಳು ಭುಜಕ್ಕೆ ತಾಕುವ ಕಡೆ, ಹೊಸ ಎಲೆಗಳ ಮಧ್ಯೆ ಹಕ್ಕಿ ಹಾಡುವ ಕಡೆ ಅವರಿಬ್ಬರೂ ಕುದುರೆಯೇರಿ ಹೋಗು ವರು. ಅವಳು ರಾಜಕುಮಾರನ ಸಂಗಡ ಪರ್ವತಶಿಖರಗಳ ತುದಿಯನ್ನು ಹತ್ತುವಳು, ಅವಳ ಕೋಮಲವಾದ ಪಾದಗಳಲ್ಲಿ ರಕ್ತ ಬಸಿದು, ಹೆಜ್ಜೆ ಇಟ್ಟಲ್ಲೆಲ್ಲ ಗುರುತುಬಿದ್ದರೂ ಅವಳು ನಗುನಗುತ್ತ ಅವನನ್ನು ಹಿಂಬಾಲಿಸು ವಳು, ಕೆಳಗಡೆ ಮೋಡಗಳು ದೂರದೇಶಗಳಿಗೆ ಪ್ರಯಾಣಮಾಡುತ್ತಿರುವ ಹಕ್ಕಿಗಳ ಹಿಂಡಿನಂತೆ ಕಾಣುವಷ್ಟು ಎತ್ತರ ಏರುವಳು. ರಾಜಕುಮಾರನ ಅರಮನೆಯಲ್ಲಿ ಇದ್ದಾಗ ಮಾತ್ರ, ಮನೆಯವರೆಲ್ಲ ನಿದ್ರೆ ಹೋದಾಗ, ತಾನು ಹೋಗಿ ಹೊರಗಡೆಯ ಅಗಲವಾದ ಬಿಳಿಶಿಲೆಯ ಸೋಪಾನದ ಮೇಲೆ ಕುಳಿತು ಕೊಳ್ಳುವಳು ಆಗ, ತಂಪಾದ ಸಮುದ್ರಜಲದಲ್ಲಿ ಅದ್ದಿದಾಗ, ಅವಳ ಪಾದ ಗಳ ಉರಿ ಶಮನವಾಗುವುದು. ಆಗ ಅವಳು ಸಮುದ್ರದ ಅಡಿಯಲ್ಲಿ ಇದ್ದವ ರನ್ನೆಲ್ಲ ಜ್ಞಾಪಿಸಿಕೊಳ್ಳುವಳು.

ಒಂದು ದಿನ ರಾತ್ರಿ ಅವಳ ಅಕ್ಕಂದಿರು ತೋಳಿಗೆ ತೋಳು ಹೆಣೆದು ಕೊಂಡು, ವ್ಯಸನದಿಂದ ಹಾಡುತ್ತಾ ನೀರಿನ ಮೇಲೆ ತೇಲಿಬಂದರು. ಮೀನ ಕನ್ಯೆ ಅವರನ್ನು ಕಂಡು ಕೈಬೀಸಿದಳು, ಅವರು ಅವಳನ್ನು ಗುರುತಿಸಿ,

'ಅಮ್ಮಾ, ನೀನು ನಮ್ಮನ್ನು ಎಷ್ಟು ದುಃಖಕ್ಕೆ ಗುರಿಪಡಿಸಿದೆ!' ಎಂದರು. ಇದಾದ ಬಳಿಕ ಅವರು ಪ್ರತಿ ರಾತ್ರಿಯೂ ಅದೇ ಸ್ಥಳಕ್ಕೆ ಬರುವರು. ಒಂದು ಸಲ, ಅನೇಕ ವರ್ಷಗಳಿಂದ ಸಮುದ್ರದ ಮೇಲಕ್ಕೆ ಬಾರದೆ ಇದ್ದ ತನ್ನ ಮುದಿಅಜ್ಜಿಯನ್ನೂ ತಲೆಯ ಮೇಲೆ ಕಿರೀಟವಿದ್ದ ತನ್ನ ತಂದೆಯಾದ ಆ ಮುದಿ ಸಮುದ್ರರಾಜನನ್ನೂ ಅವಳು ದೂರದಲ್ಲಿ ಕಂಡಳು ಅವರು ಅವಳ ಕಡೆಗೆ ಕೈನೀಡಿ ಕರೆದರು. ಅವಳ ಅಕ್ಕಂದಿರು ಹತ್ತಿರ ಹೋದಂತೆ ಹೋಗುವ ಧೈರ್ಯ ಅವರಿಗಿರಲಿಲ್ಲ.

ದಿನಗಳು ಕಳೆದ ಹಾಗೆಲ್ಲ ರಾಜಕುಮಾರನನ್ನು ಕಂಡರೆ ಅವಳಿಗೆ ಹೆಚ್ಚು ಹೆಚ್ಚು ಇಷ್ಟವಾಯಿತು. ಅವನು ಕೂಡ ಸಣ್ಣ ಮಗುವನ್ನು ಪ್ರೀತಿಸುವ ಹಾಗೆ ಅವಳನ್ನು ಪ್ರೀತಿಸಿದನು. ಆದರೆ ಅವಳನ್ನು ತನ್ನ ಹೆಂಡತಿಯಾಗಿ ವರಿಸಬೇಕೆಂದು ಒಂದು ಸಲವಾದರೂ ಅವನ ಮನಸ್ಸಿಗೆ ತೋಚಲಿಲ್ಲ. ಆದರೆ, ಪಾಪ, ಅವನು ಅವಳನ್ನು ಮದುವೆಯಾದ ಹೊರತು ಅವಳಿಗೆ ಅಮರವಾದ ಆತ್ಮ ಲಭಿಸುವಂತಿರಲಿಲ್ಲ, ಅಷ್ಟೇ ಅಲ್ಲ, ಅವನು ಬೇರೊಬ್ಬಳನ್ನು ಮದುವೆಯಾದ ಮರುದಿವಸವೇ ಅವಳು ಸಮುದ್ರದ ನೊರೆಯಾಗಿ ಕರಗಿ ಹೋಗಬೇಕು.

ರಾಜಕುಮಾರನು ಅವಳನ್ನು ತನ್ನ ತೋಳುಗಳಿಂದ ತಬ್ಬಿ, ಅವಳ ಮುದ್ದಾದ ಹಣೆಯ ಮೇಲೆ ಮುತ್ತಿಟ್ಟಾಗ ಆ ಮೀನಕನ್ಯೆಯ ಕಣ್ಣುಗಳು 'ಇಲ್ಲಿರುವವರಲ್ಲಿ ನನ್ನನ್ನೇ ನೀನು ಹೆಚ್ಚು ಪ್ರೀತಿಸುತ್ತೀಯೆ, ಅಲ್ಲವೆ?' ಎಂದು ಪ್ರಶ್ನಿಸುತ ಹಾಗೆ ಇರುತ್ತಿತ್ತು

ಆಗ ರಾಜಕುಮಾರನು "ಹೌದು, ನಿನ್ನನ್ನು ಕಂಡರೆ ನನಗೆ ಇಷ್ಟವೇ. ನಿನ್ನ ಹೃದಯ ಚಿನ್ನ. ನೀನು ನನಗೆ ಎಷ್ಟು ಸೇವೆ ಮಾಡುತ್ತೀ! ಹಿಂದೆ ಒಬ್ಬ ಕನ್ಯೆ ನನ್ನ ಜೀವ ಉಳಿಸಿದಳು. ನಾನು ಅವಳನ್ನು ಪುನಃ ಕಾಣುವೆನೋ ಇಲ್ಲವೋ. ನಿನ್ನನ್ನು ನೋಡಿದರೆ ಅವಳನ್ನು ನೋಡಿದ ಹಾಗಾಗುತ್ತದೆ. ಒಂದು ಸಲ ನನ್ನ ಹಡಗು ಒಡೆದು, ಸಮುದ್ರದ ಅಲೆಗಳು ನನ್ನನ್ನು ದಡಕ್ಕೆ ಎಸೆದಾಗ, ಅಲ್ಲಿಗೆ ಅನೇಕ ಕನ್ಯೆಯರು ಬಂದಿದ್ದರು; ಅವರಲ್ಲಿ ಕಿರಿ

ಯುವಳು ನನ್ನ ಪ್ರಾಣವುಳಿಸಿದಳು. ನಾನು ಅವಳನ್ನು ಎರಡು ಬಾರಿ ಮಾತ್ರ ಕಂಡೆ. ನಾನು ಪ್ರೀತಿಸಿದರೆ ಅವಳೊಬ್ಬಳನ್ನು ಪ್ರೀತಿಸಿಯೇನು. ಆದರೆ ನೀನು ಅವಳ ಹಾಗೇ ಇದ್ದೀಯೆ, ನಿನ್ನನ್ನು ನೋಡಿದರೆ ಅವಳ ನೆನಪು ಕೂಡ ನನಗೆ ಮರೆತುಹೋಗುತ್ತದೆ. ಅವಳಿಗೆ ಬದಲಾಗಿ ನೀನಾದರೂ ಬಂದುದು ನನ್ನ ಅದೃಷ್ಟ ನೀನು ನನ್ನೊಡನೆಯೇ ಇರು'' ಎಂದು ಹೇಳಿದನು.

"ಓ, ನಾನು ತನ್ನ ಜೀವವುಳಿಸಿದೆನೆಂದು ಇವನಿಗೆ ತಿಳಿಯದು. ಸಮುದ್ರದಿಂದ ತೀರದ ಕಾಡಿಗೆ ಇವನನ್ನು ಒಯ್ದವಳು ನಾನು. ನೊರೆಯ ಅಡಿಯಲ್ಲಿ ಬಚ್ಚಿಟ್ಟುಕೊಂಡು, ಇವನ ಸಹಾಯಕ್ಕೆ ಜನರು ಬಂದುದನ್ನು ನಾನು ನೋಡಿದೆ ಇವನು ನನ್ನನ್ನು ಪ್ರೀತಿಸುವದಕ್ಕಿಂತ ಹೆಚ್ಚಾಗಿ ಪ್ರೀತಿಸುವ ಆ ಕನ್ಯೆಯನ್ನು ನಾನೂ ನೋಡಿದ್ದೇನೆ" ಎಂದುಕೊಂಡು, ಆ ಮೀನ ಕನ್ಯೆ ನಿಟ್ಟುಸಿರುಬಿಟ್ಟಳು. ಆದರೆ ಅವಳ ಕಣ್ಣುಗಳಲ್ಲಿ ಕಣ್ಣೀರು ಬರಲಿಲ್ಲ. "ಆದರೆ ಆ ಕನ್ಯೆ ಸಮುದ್ರತೀರದ ದೇವಾಲಯಕ್ಕೆ ಸೇರಿದವಳು. ಅವಳು ಇಲ್ಲಿಗೆ ಬರುವ ಸಂಭವ ಕಡಿಮೆ ಇವರು ಒಬ್ಬರನ್ನೊಬ್ಬರು ಕಾಣುವಂತಿಲ್ಲ. ನಾನೇ ಇವನ ಜೊತೆಯಲ್ಲಿದ್ದು, ಇವನ ಆರೈಕೆಮಾಡಿ, ಇವನನ್ನು ಪ್ರೀತಿಸಿ, ಇವನಿಗೋಸ್ಕರ ನನ್ನ ಜೀವವನ್ನಾದರೂ ತ್ಯಾಗಮಾಡುವೆನು" ಎಂದುಕೊಂಡಳು.

ಅಷ್ಟರಲ್ಲಿಯೇ ರಾಜಕುಮಾರನಿಗೆ ಮದುವೆಯಾಗುತ್ತದೆ, ನೆರೆಯ ರಾಜನ ಮಗಳನ್ನು ಅವನು ಮದುವೆಯಾಗುತ್ತಾನೆ, ಅದಕ್ಕಾಗಿ ಒಂದು ದೊಡ್ಡ ಹಡಗು ಸಿದ್ಧವಾಗುತ್ತಿದೆ—ಎಂದು ಸುದ್ದಿ ಹುಟ್ಟಿತು. ರಾಜಕುಮಾರನು ತಾನೇನೋ ನೆರೆಯ ರಾಜನ ಸಂದರ್ಶನಕ್ಕಾಗಿ ಹೋಗುತ್ತಿರುವೆನೆಂದು ಹೇಳಿಕೊಂಡರೂ ಕೂಡ ಅವನು ನಿಜವಾಗಿಯೂ ಹೋಗುವುದು ಆ ರಾಜನ ಮಗಳನ್ನು ನೋಡುವುದಕ್ಕಾಗಿಯೇ ಎಂದು ಸಾಮಾನ್ಯವಾಗಿ ಎಲ್ಲರಿಗೂ ಗೊತ್ತಿತ್ತು. ಅವನ ಜೊತೆಯಲ್ಲಿ ಆಸ್ಥಾನದವರೂ ಕೆಲವರು ಹೊರಟರು. ಮೀನಕನ್ಯೆ ತನಗೆ ತಾನೇ ನಸುನಕ್ಕು ತಲೆಯಾಡಿಸಿದಳು. ರಾಜಕುಮಾರನ ಮನಸ್ಸಿನಲ್ಲಿ ಏನಿತ್ತೆಂಬುದನ್ನು ಅವಳು ಉಳಿದವರಿಗಿಂತ ಚೆನ್ನಾಗಿ ತಿಳಿದಿದ್ದಳು.

"ನಾನು ಹಡಗಿನಲ್ಲಿ ಹೋಗಿ, ಆ ರಾಜಕುಮಾರಿಯನ್ನು ಕಂಡುಬರಬೇಕು. ಅದು ನನ್ನ ತಾಯಿತಂದೆಗಳ ಇಷ್ಟ. ಆದರೆ ಅವಳನ್ನು ಮದುವೆ

ಯಾಗಿ ಮನೆಗೆ ಕರೆದುತರಬೇಕೆಂದು ಅವರು ಬಲವಂತಪಡಿಸುವುದಿಲ್ಲ ನಾನು ಅವಳನ್ನು ಪ್ರೀತಿಸಲಾರೆ. ಅವಳು ನಾನು ಆ ದಿನ ಸಮುದ್ರತೀರದಲ್ಲಿ ಕಂಡ ಕನ್ಯೆಯು ಹಾಗಿರಲಾರಳು ನಾನು ಮದುವೆಯಾಗಿಯೇ ತೀರಬೇಕಾದರೆ, ನೀನು ಮೂಗಿಯಾದರೂ ನಿನ್ನನ್ನೇ ಮದುವೆಯಾದೇನು" ಎಂದು ಆ ರಾಜಕುಮಾರನು ಆ ಮೀನಕನ್ಯೆಯ ಗುಲಾಬಿಬಾಯಿಗೆ ಮುತ್ತಿಟ್ಟು, ಅವಳ ಉದ್ದವಾದ ಕೊಂಕು ತಲೆಕೂದಲಿನಲ್ಲಿ ತನ್ನ ಕೈಬೆರಳುಗಳನ್ನು ಆಡಿಸಿದನು. ಆಗ ಮೀನಕನ್ಯೆ ಮಾನವಸೌಖ್ಯವನ್ನೂ ಅಮೃತವಾದ ಆತ್ಮವನ್ನೂ ಕುರಿತು ಕನಸು ಕಂಡಳು.

ಹೀಗೆ ಅವರಿಬ್ಬರೂ ಹಡಗಿನ ಮೇಲುಭಾಗದಲ್ಲಿ ನಿಂತಿದ್ದಾಗ "ಸಮುದ್ರವನ್ನು ಕಂಡರೆ ನಿನಗೆ ಹೆದರಿಕೆ ಆಗುವುದಿಲ್ಲವಲ್ಲವೆ, ಮೂಗುಮಗು?" ಎಂದು ರಾಜಕುಮಾರನು ಅವಳನ್ನು ಕೇಳಿ, ಸಮುದ್ರ ಶಾಂತವಾಗಿದ್ದರೆ ಹೇಗಿರುತ್ತದೆ, ಬಿರುಗಾಳಿ ಎದ್ದರೆ ಹೇಗಿರುತ್ತದೆ, ಸಮುದ್ರದ ಅಡಿಯಲ್ಲಿ ಎಂಥೆಂಥ ವಿಚಿತ್ರವಾದ ಮೀನ ಗಳಿರುತ್ತವೆ, ಸಮುದ್ರದಲ್ಲಿ ಮುಳುಗಿ ನೋಡುವವರು ಏನೇನು ಕಂಡಿದ್ದಾರೆ ಮುಂತಾದ ಅನೇಕ ವಿಷಯಗಳನ್ನು ಅವಳಿಗೆ ಹೇಳಿದನು. ಸಮುದ್ರದ ಅಡಿಯಲ್ಲಿ ಏನೇನಿದೆ ಎಂಬುದನ್ನು ಅವನಿಗಿಂತ ಚೆನ್ನಾಗಿ ಅವಳು ತಿಳಿದಿದ್ದ ಕಾರಣ ಅವನ ವರ್ಣನೆಗಳನ್ನು ಕೇಳಿ ಅವಳು ಮುಗುನಕ್ಕಳು.

ಬೆಳುದಿಂಗಳು ರಾತ್ರಿಯಲ್ಲಿ, ಹಡಗಿನಲ್ಲಿ ಇದ್ದವರೆಲ್ಲರೂ ನಿದ್ರೆ ಹೋದ ಮೇಲೆ, ಹಡಗು ನಡಸುವವನು ಒಬ್ಬನು ಮಾತ್ರ ಎಚ್ಚರವಾಗಿದ್ದಾಗ ಮೀನಕನ್ಯೆ ಹಡಗಿನ ಮೇಲುಭಾಗದಲ್ಲಿ ಕುಳಿತು ಸಮುದ್ರದ ಸ್ವಚ್ಛವಾದ ನೀರಿನ ಮೂಲಕ ಅಡಿಯನ್ನೇ ದೃಷ್ಟಿಸಿದಳು. ಅಲ್ಲಿ ತನ್ನ ತಂದೆಯ ಅರಮನೆಯನ್ನು ತಾನು ಗುರುತಿಸಿದಂತೆಯೂ ತನ್ನ ಮುದಿಅಜ್ಜಿ ಕಿರೀಟ ಧರಿಸಿದ ತಲೆಯನ್ನು ಮೇಲೆತ್ತಿ, ಹಡಗಿನ ಕಡೆಗೆ ಕೈನೀಡಿ ತನ್ನನ್ನು ಕರೆಯುತ್ತಿರುವಂತೆಯೂ ಭಾವಿಸಿಕೊಂಡಳು ಆಗ ಅವಳ ಅಕ್ಕಂದಿರು ವ್ಯಸನದಿಂದ ಅವಳನ್ನೇ ನೋಡುತ್ತ, ಕೈಕೈ ಹಿಸುಕಿಕೊಳ್ಳುತ್ತ ಅಲೆಗಳ ಮೇಲೆದ್ದು ಬಂದರು. ಅವಳು ಅವರ ಕಡೆ ಸಂಜ್ಞೆಮಾಡಿ ಮುಗುನಗೆ ಬೀರಿದಳು. ತಾನು ಎಷ್ಟು ಸುಖವಾಗಿ

ದ್ದೇನೆ, ಎಷ್ಟು ಸಂತೋಷವಾಗಿದ್ದೇನೆ ಎಂದು ಅವರಿಗೆ ಹೇಳಬೇಕೆಂದು ಅವಳಿಗೆ ಇಷ್ಟವಿತ್ತು. ಆದರೆ ಹಡಗಿನಲ್ಲಿ ಕೆಲಸಮಾಡುವ ಒಬ್ಬ ಹುಡುಗ ಆಗ ಬಂದದ್ದರಿಂದ ಅವಳ ಅಕ್ಕಂದಿರು ನೀರಿನಲ್ಲಿ ಮುಳುಗಿ ಮರೆಯಾದರು. ಆ ಹುಡುಗ ತಾನು ಸಮುದ್ರದ ನೊರೆಯನ್ನು ಕಂಡೆ ಎಂದುಕೊಂಡ.

ಮಾರನೆಯ ಬೆಳಗ್ಗೆ ಹಡಗು ಒಂದು ಸುಂದರವಾದ ಪಟ್ಟಣದ ರೇವನ್ನು ಮುಟ್ಟಿತು. ಆ ಪಟ್ಟಣದ ರಾಜನನ್ನು ಕಾಣಬೇಕೆಂದೇ ಈ ರಾಜಕುಮಾರನು ಬಂದಿದ್ದುದು. ದೇವಸ್ಥಾನದ ಗಂಟೆಗಳೆಲ್ಲ ಶಬ್ದಮಾಡುತ್ತಿದ್ದುವು. ಗೋಪುರಗಳಿಂದ ಕೊಂಬು ಕಹಳೆ ಊದುತ್ತಿದ್ದರು, ಕತ್ತಿ ಕೋವಿಗಳನ್ನು ಹಿಡಿದು, ಬಣ್ಣಬಣ್ಣದ ಉಡುಪು ಹಾಕಿದ ಸೈನಿಕರು ದಾರಿಯ ಉದ್ದಕ್ಕೂ ಸಾಲಾಗಿ ನಿಂತಿದ್ದರು. ಊರಲ್ಲೆಲ್ಲ ಹಬ್ಬ ಇದ್ದಹಾಗಿತ್ತು. ಸಂಗೀತಗಳೂ ನರ್ತನಗಳೂ ಯಥೇಚ್ಛವಾಗಿ ನಡೆಯುತ್ತಿದ್ದುವು.

ಆದರೆ ರಾಜಕುಮಾರಿ ಮಾತ್ರ ಇನ್ನೂ ಗೋಚರವಾಗಲಿಲ್ಲ. ಅವಳು ಯಾವುದೋ ದೇವಸ್ಥಾನದಲ್ಲಿ ತನ್ನ ವಿದ್ಯಾಭ್ಯಾಸವನ್ನು ಪಡೆಯುತ್ತಿರುವಳೆಂದು ಜನರು ಹೇಳಿಕೊಳ್ಳುತ್ತಿದ್ದರು. ಕಟ್ಟಕಡೆಗೆ ಅವಳು ಬಂದಳು. ಅವಳು ನಿಜವಾಗಿಯೂ ಸುಂದರಿ ಅಹುದೋ ಅಲ್ಲವೋ ಕಾಣಬೇಕೆಂದು ತವಕಪಡುತ್ತಿದ್ದ ಮೀನಕನ್ಯೆ ಅವಳನ್ನು ಕಂಡು, ಅವಳು ನಿಜವಾಗಿಯೂ ಪರಮ ಪರಿಪೂರ್ಣ ಸುಂದರಿಯೆಂದು ತಾನೂ ಒಪ್ಪಿಕೊಂಡಳು. ಆ ರಾಜಕುಮಾರಿಯ ಮೈಚರ್ಮ ತುಂಬ ಕೋಮಲವಾಗಿತ್ತು, ಅವಳ ವಿಶಾಲವಾದ ನೀಲಿಕಣ್ಣುಗಳಲ್ಲಿ ಸತ್ಯವೂ ನಿಷ್ಕಾಪಟ್ಯವೂ ಕಿಲಕಿಲನೆ ನಗುತ್ತಿದ್ದುವು.

"ನೀನೇ! ಆ ದಿನ ನಾನು ಸತ್ತ ಹಾಗೆ ಸಮುದ್ರತೀರದಲ್ಲಿ ಬಿದ್ದಿದ್ದಾಗ ನನಗೆ ಜೀವದಾನ ಮಾಡಿದವಳು ನೀನೇ!" ಎಂದು ರಾಜಕುಮಾರನು ಆ ವಧುವನ್ನು ತೋಳುಗಳಿಂದ ತಬ್ಬಿಕೊಂಡು, ಮೀನಕನ್ಯೆಯ ಕಡೆ ತಿರುಗಿ "ಓ! ಇದು ನನಗೆ ಪರಮ ಸಂತೋಷ. ನನ್ನ ಇಷ್ಟ ಪೂರ್ಣವಾಯಿತು. ನನಗೆ ಸುಖವಾಗಲೆಂದು ಸದಾ ಕೋರುತ್ತಿರುವ ನಿನಗೂ ಇದರಿಂದ ಸಂತೋಷ. ಅಲ್ಲವೆ?" ಎಂದು ಕೇಳಿದನು.

ಮೀನಕನ್ಯೆಗೆ ಆಗಲೇ ತನ್ನ ಎದೆಯೊಡೆದಂತೆ ಆಯಿತು, ಆದರೂ ರಾಜಕುಮಾರನ ಕೈಗೆ ಮುತ್ತಿಟ್ಟಳು. ಅವನಿಗೆ ಮದುವೆಯಾದ ಮಾರನೆಯ ದಿನ ತಾನು ಸಾಯಬೇಕು, ಸಮುದ್ರದ ನೊರೆಯಾಗಿ ಹೋಗಬೇಕು. ಗುಡಿಯ ಗಂಟೆಗಳೆಲ್ಲ ಬಾರಿಸಿದುವು, ಮದುವೆಯ ಸುದ್ದಿಯನ್ನು ಊರಲ್ಲೆಲ್ಲ ಸಾರಿದರು. ಪ್ರತಿ ದೇವರ ಮುಂದೆಯೂ ಬೆಳ್ಳಿಯ ಹಣತೆಗಳಲ್ಲಿ ಸುಗಂಧ ತೈಲದ ದೀಪ ಹಚ್ಚಿದರು. ವಧೂವರರು ಪಾಣಿಗ್ರಹಣಮಾಡಿ, ಪುರೋಹಿತರ ಆಶೀರ್ವಾದವನ್ನು ಪಡೆದರು. ಚಿಕ್ಕ ಮೀನಕನ್ಯೆ ರೇಷ್ಮೆಯನ್ನು ಉಟ್ಟು ಚಿನ್ನವನ್ನು ತೊಟ್ಟು ವಧುವಿನ ಹಿಂದೆ ನಿಂತಿದ್ದಳು. ಮಂಗಳವಾದ್ಯ ಯಾವುದೂ ಅವಳ ಕಿವಿಗೆ ಬೀಳಲಿಲ್ಲ, ಮಂಗಳದೃಶ್ಯ ಯಾವುದೂ ಅವಳ ಕಣ್ಣಿಗೆ ಕಾಣಲಿಲ್ಲ. ತನಗೆ ಸಾವು ಸಮೀಪಿಸುತ್ತಿದ್ದುದನ್ನೂ ತನ್ನ ಸರ್ವಸ್ವವೂ ನಾಶವಾದುದನ್ನೂ ಕುರಿತು ಚಿಂತಿಸುತ್ತಿದ್ದಳು

ಅದೇ ಸಂಜೆ ವಧೂವರರು ಹಡಗಿನ ಮೇಲುಭಾಗಕ್ಕೆ ಬಂದರು. ಅಲ್ಲಿ ತೋಪುಗಳನ್ನು ಹಾರಿಸುತ್ತಿದ್ದರು, ಬಾವುಟಗಳು ಬೀಸುತ್ತಿದ್ದುವು. ಹಡಗಿನ ಮಧ್ಯದಲ್ಲಿ ಅಮೂಲ್ಯವಾದ ಕುಂಕುಮವರ್ಣದ ಗುಡಾರವನ್ನು ಎತ್ತಿದ್ದರು. ಅದರಲ್ಲಿ ವಧೂವರರಿಗಾಗಿ ಎರಡು ನೊಗಸಾದ ಮಂಚಗಳನ್ನು ಹಾಕಿದ್ದರು. ಅನುಕೂಲವಾಗಿ ಗಾಳಿ ಬೀಸುತ್ತಿತ್ತು, ಹಡಗು ಹಾಯಿಪಟ ಬಿಚ್ಚಿಕೊಂಡು ನಿರಾಯಾಸವಾಗಿ ಸಮುದ್ರದ ಮೇಲೆ ತೇಲಿ ಹೋಗುತ್ತಿತ್ತು. ಕತ್ತಲೆ ಯಾದಾಗ ಬಣ್ಣಬಣ್ಣದ ದೀಪಗಳನ್ನು ಹತ್ತಿಸಿ, ಅದರ ಬೆಳಕಿನಲ್ಲಿ ನಾವಿಕರು ಆನಂದದಿಂದ ಕುಣಿದಾಡಿದರು. ಅದನ್ನು ಕಂಡ ಮೀನಕನ್ಯೆಗೆ ತಾನು ಮೊದಲ ಬಾರಿಗೆ ಸಮುದ್ರದ ಮೇಲೆ ಬಂದುದೂ ಆಗ ಇಂಥದೇ ಸಂತೋಷದ ದೃಶ್ಯ ಗಳನ್ನು ಕಂಡುದೂ ನೆನಪಾಯಿತು ಆ ಸಂತೋಷದ ನರ್ತನದಲ್ಲಿ ಅವಳೂ ಸೇರಿದಳು, ಆಕಾಶದಲ್ಲಿ ಹಕ್ಕಿ ತೇಲುವಂತೆ ತಾನೂ ತೇಲಿದಳು. ನೋಡಿದವ ರೆಲ್ಲ ಮೆಚ್ಚಿ ಕೂಗಿದರು ಅಷ್ಟು ಮನೋಹರವಾಗಿ ಅವಳು ಹಿಂದೆ ಎಂದೂ ನರ್ತನಮಾಡಿರಲಿಲ್ಲ. ಅವಳ ಕೋಮಲವಾದ ಪಾದಗಳನ್ನು ಹರಿತವಾದ ಅಲಗಿನಿಂದ ಕುಯಿದ ಹಾಗೆ ನೋವಾಗುತ್ತಿದ್ದರೂ ಅವಳು ಏನೂ ಲಕ್ಷಿಸಲಿಲ್ಲ. ಅವಳ ಹೃದಯ ಅದಕ್ಕಿಂತ ಹೆಚ್ಚಿನ ನೋವು ಅನುಭವಿಸುತ್ತಿತ್ತು. ಯಾರಿ

ಗೋಸ್ಕರ ತಾನು ತನ್ನ ಬಂಧುಬಳಗವನ್ನೂ ಮನೆಮಠವನ್ನೂ ತೊರೆದು ಬಂದಳೋ, ಯಾರಿಗೋಸ್ಕರ ತನ್ನ ದಿವ್ಯವಾದ ಕಂಠವನ್ನೂ ಕಳೆದುಕೊಂಡು ಪರಮ ದಾರುಣವಾದ ಯಾತನೆಗಳನ್ನು ಅನುಭವಿಸಿದಳೋ ಅವನಿಗೆ, ಪಾಪ, ಇದೊಂದೂ ತಿಳಿಯದು, ಅವನ ಜೊತೆಯಲ್ಲಿ ತಾನು ಇರುವುದು ಇದೇ ಕಡೆಯಸಲ–ಎಂದು ಆ ಮೀನಕನ್ಯೆಗೆ ತಿಳಿದಿತ್ತು. ಅವನೊಡನೆ ಕುಳಿತು, ಅದೇ ಗಾಳಿಯನ್ನು ಉಸಿರಾಡಿ, ಅದೇ ನಕ್ಷತ್ರಗಳನ್ನೂ ಅದೇ ಸಮುದ್ರವನ್ನೂ ತಾನು ನೋಡುವುದು ಇದೇ ಕಡೆಯ ಬಾರಿ, ಮುಂದೆ ಒಂದು ಗಾಢವಾದ ಕಾಳರಾತ್ರಿ ತನಗಾಗಿ ಕಾದಿದೆ; ತನಗೆ ಅಮರವಾದ ಆತ್ಮ ದೊರಕಲಿಲ್ಲ, ಇನ್ನು ಮುಂದೆ ಎಂದೂ ದೊರಕುವುದು ಸಾಧ್ಯವಿಲ್ಲ. ಹೀಗೆಯೇ ಮಧ್ಯರಾತ್ರಿ ಯಾದರೂ ಹಡಗಿನಲ್ಲಿ ಸಂತೋಷ ಸಂರಂಭಗಳು ಮುಗಿಯಲಿಲ್ಲ. ಮೀನ ಕನ್ಯೆ ಎಲ್ಲರೊಡನೆ ತಾನೂ ನಕ್ಕು ನರ್ತನಮಾಡಿದರೂ ಅವಳ ಮನಸ್ಸಿನ ತುಂಬ ಸಾವಿನ ಚಿಂತೆಯೇ ತುಂಬಿತ್ತು.

ರಾಜಕುಮಾರನೂ ಅವನ ಹೊಸ ಹೆಂಡತಿಯೂ ನಿದ್ರೆಮಾಡಲು ಹೋದರು. ಹಡಗಿನಲ್ಲಿ ಎಲ್ಲವೂ ಶಾಂತವಾಯಿತು. ಹಡಗು ನಡಸುವವನು ಒಬ್ಬ ಮಾತ್ರ ಎಚ್ಚರವಾಗಿದ್ದ. ಚಿಕ್ಕ ಮೀನಕನ್ಯೆ ಹಡಗಿನ ಅಂಚಿನ ಮೇಲೆ ತೋಳುಗಳನ್ನು ಊರಿ, ಬೆಳಗಿನ ಅರುಣವನ್ನು ನಿರೀಕ್ಷಿಸಿ ಪೂರ್ವದ ಕಡೆ ನೋಡುತ್ತಿದ್ದಳು, ಬೆಳಗಿನ ಜಾವದ ಮೊದಲ ಕಿರಣ ಕಾಣಿಸಿಕೊಂಡಾಗಲೇ ಅವಳ ಮರಣಕಾಲ. ಆಗ ಮೀನಕನ್ಯೆ ತನ್ನ ಅಕ್ಕಂದಿರು ಮೇಲೆದ್ದು ಬಂದು ದನ್ನು ಕಂಡಳು. ಅವರ ಮುಖ ಕೂಡ ತನ್ನದರ ಹಾಗೆಯೇ ರಕ್ತಹೀನ ವಾಗಿತ್ತು, ಅವರ ನೀಳವಾದ, ಸುಂದರವಾದ ತಲೆಗೂದಲು ಮೊದಲಿನಂತೆ ಗಾಳಿಯಲ್ಲಿ ಆಡುತ್ತಿರಲಿಲ್ಲ, ಅದು ಕತ್ತರಿಸಿಹೋಗಿತ್ತು.

"ತಂಗಿ, ನೀನು ಈ ರಾತ್ರಿ ಸಾಯಬಾರದೆಂದು, ನಿನಗೆ ಸಹಾಯ ಒದಗಿಸಬೇಕೆಂದು ನಾವು ನಮ್ಮ ತಲೆಗೂದಲನ್ನು ಸಮುದ್ರದ ಮಾಟಗಾತಿಗೆ ಕೊಟ್ಟಿದ್ದೇವೆ. ಅವಳು ನಮಗೊಂದು ಚೂರಿಯನ್ನು ಕೊಟ್ಟಿದ್ದಾಳೆ ಇದೋ ನೋಡು, ಇದು ತುಂಬ ಹರಿತವಾಗಿದೆ. ಸೂರ್ಯನು ಉದಯಿಸುವುದರೊಳಗೆ ನೀನು ಇದನ್ನು ಅವನ ಎದೆಯಲ್ಲಿ ನೆಡು, ಆ ಬಿಸಿಯಾದ ರಕ್ತ ನಿನ್ನ

ಪಾದಗಳ ಮೇಲೆ ಬಿದ್ದಾಗ, ಅವು ಪುನಃ ಒಟ್ಟುಸೇರಿ, ಮೊದಲಿನಂತೆ ಮೀನಿನ ಬಾಲವಾಗುವುದು, ನೀನು ಪುನಃ ಮೀನಕನ್ಯೆಯಾಗುವೆ, ನಮ್ಮೊಡನೆ ಬಂದು, ನಮ್ಮಂತೆಯೇ ಮುನ್ನೂರು ವರ್ಷಗಳು ಬಾಳಿ, ಕಡೆಗೆ ಉಪ್ಪು ಸಮುದ್ರದ ನೊರೆಯಾಗುವೆ. ಆದಕಾರಣ, ತ್ವರೆಮಾಡು, ನೀನಾಗಲಿ ಅಥವಾ ಅವನಾಗಲಿ ಸೂರ್ಯೋದಯಕ್ಕೆ ಮುಂಚೆ ಸಾಯಬೇಕು. ನಮ್ಮ ಮುದಿ ಅಜ್ಜಿ ನಿನಗಾಗಿ ತುಂಬ ಗೋಳಾಡುತ್ತಾಳೆ ಮಾಟಗಾತಿಯ ಕತ್ತರಿಗೆ ಸಿಕ್ಕಿ ನಮ್ಮ ತಲೆಗೂದಲು ಬಿದ್ದಹಾಗೆಯೇ ಅವಳ ನರೆಗೂದಲೂ ದುಃಖ ದಿಂದ ಉದುರಿಹೋಗುತ್ತಿದೆ. ಹೋಗು, ರಾಜಕುಮಾರನನ್ನು ಕೊಂದು, ನಮ್ಮೊಡನೆ ಬಾ ಬೇಗ ಹೋಗು. ಅದೋ, ದಿಗಂತದಲ್ಲಿ ಸೂರ್ಯೋದಯದ ಮೊದಲ ಎಳೆಗಳು ಗೋಚರವಾಗುತ್ತಿವೆ. ಇನ್ನು ಕೆಲವೇ ಕ್ಷಣಗಳಲ್ಲಿ ಸೂರ್ಯನು ಉದಿಸಿಬಿಡುತ್ತಾನೆ, ನೀನು ಸತ್ತುಹೋಗುವೆ'' ಎಂದು ಅವರು ಹೇಳಿ, ವ್ಯಸನದಿಂದ ನಿಟ್ಟುಸಿರುಬಿಟ್ಟು, ಅಲೆಗಳ ಅಡಿಯಲ್ಲಿ ಮುಳುಗಿ ಮಾಯವಾದರು.

ಚಿಕ್ಕ ಮೀನಕನ್ಯೆ ಗುಡಾರದ ಕುಂಕುಮವರ್ಣದ ತೆರೆಯನ್ನು ಪಕ್ಕಕ್ಕೆ ಎಳೆದು ನೋಡಿದಳು: ರಾಜಕುಮಾರಿ ರಾಜಕುಮಾರನ ಎದೆಯ ಮೇಲೆ ತಲೆಯಿಟ್ಟುಕೊಂಡು ಮಲಗಿದ್ದುದನ್ನು ಕಂಡಳು ಮೀನಕನ್ಯೆ ಬಗ್ಗಿ ರಾಜ ಕುಮಾರನ ಹಣೆಗೆ ಮುತ್ತಿಟ್ಟು, ಆಕಾಶದ ಕಡೆ ನೋಡಿದಳು. ಬೆಳಗಿನ ಜಾವದ ಗುಲಾಬಿಬಣ್ಣ ಕೆಂಪೇರುತ್ತಿತ್ತು. ಮೀನಕನ್ಯೆ ತನ್ನ ಕೈಯಲ್ಲಿದ್ದ ಹರಿತವಾದ ಚೂರಿಯನ್ನು ಒಂದುಸಲ ನೋಡಿ, ರಾಜಕುಮಾರನನ್ನು ದೃಷ್ಟಿ ಸಿದಳು. ರಾಜಕುಮಾರನು ಕನಸಿನಲ್ಲಿ ತನ್ನ ಹೊಸ ಹೆಂಡತಿಯ ಹೆಸರನ್ನು ಕನವರಿಸಿಕೊಳ್ಳುತ್ತಿದ್ದ ಅವನು ಕನಸುಮನಸಿನಲ್ಲಿಯೂ ಅವಳನ್ನೇ ನೆನೆಯು ತ್ತಿದ್ದುದನ್ನು ಕಂಡು ಚಿಕ್ಕ ಮೀನಕನ್ಯೆಯ ಕೈಯಲ್ಲಿದ್ದ ಚೂರಿ ನಡುಗಿತು. ಅವಳು ಅದನ್ನು ದೂರದ ಅಲೆಗಳ ಕಡೆಗೆ ಎಸೆದುಬಿಟ್ಟಳು. ಅದು ಬಿದ್ದ ಕಡೆ ನೀರು ಕೆಂಪಾಯಿತು. ರಕ್ತದ ಹಾಗಿದ್ದ ನೀರಿನ ಹನಿಗಳು ಮೇಲೆ ಚಿಮ್ಮಿ ದುವು. ಅವಳು ರಾಜಕುಮಾರನನ್ನು ಬಿಟ್ಟು ಹೋಗಲಾರದ ದೃಷ್ಟಿಯಿಂದ ಅವನನ್ನು ಕಡೆಯ ಬಾರಿ ಕಣ್ಣುತುಂಬ ನೋಡಿ, ಕಡೆಗೆ ಹಡಗಿನಿಂದ

ಕುರೂಪಿಯಾದ ಮರಿಬಾತು



ಕಟ್ಟಕಡೆಗೆ ಆ ಮೊಟ್ಟೆ ಒಡೆಯಿತು

# ಕುರೂಪಿಯಾದ ಮರಿಬಾತು

ಮೊಟ್ಟೆ ಹಂಸದ ಮೊಟ್ಟೆಯಾಗಿದ್ದರೂ, ಮರಿ ಹಂಸದ ಮರಿಯಾಗಿದ್ದರೂ, ಬಾತುಗಳ ನಡುವೆ ಇದ್ದುದರಿಂದ ಅದು ಬಾತುಗಳ ಕಣ್ಣಿಗೆ ಬಾತುವೇ ಆದರೂ, ಇತರ ಬಾತುಗಳಂತೆ ಅಲ್ಲದ ವಿಕಾರವಾದ ಬಾತು! ಆದರೆ ಅದೇ ಮರಿ ಬೆಳೆದು, ಅದರ 'ಹಂಸತನ' ಪರಿಪೂರ್ಣವಾದಾಗ ಹಂಸಗಳು ಅದನ್ನು ಸ್ವಾಗತಿಸಿದುವು, ಮನುಷ್ಯರು ಕೂಡ ಅದನ್ನು ಮೆಚ್ಚಿಕೊಂಡರು ಆದರೆ ಆ ಬೆಳವಣಿಗೆಯ ಕಾಲದಲ್ಲಿ, ಪಾಪ, ಆ ಹಂಸ ಎಷ್ಟು ಪಾಡುಪಟ್ಟಿತು!

ಈ ಕತೆಯನ್ನು ಬರೆದ ಹ್ಯಾನ್ಸ್ ಕ್ರಿಶ್ಚನ್ ಆ್ಯಂಡರ್ಸನ್ ಮೊದಲು ಹೀಗೇ ಪಾಡುಪಟ್ಟು, ಕಡೆಗೆ ಸುಖದ ಶಿಖರವನ್ನು ಕಂಡವನು. ಬಡವರ ಮನೆಯಲ್ಲಿ ಹುಟ್ಟಿ, ಬಡತನದಲ್ಲೆ ಬೆಳೆದು, ಅಜ್ಞಾತನಾಗಿ, ಎಲ್ಲರ ಅಸಡ್ಡೆಗೂ ಗುರಿಯಾಗಿ, ಇದ್ದು, ಮಕ್ಕಳ ಸಂತೋಷಕ್ಕಾಗಿ ತನ್ನ 'ಫೆಯ್ರಿ ಟೇಲ್ಸ್' ಬರೆದ ಕೂಡಲೆ ರಾಜಾಧಿರಾಜರ ಕಣ್ಮಣಿಯಾದ. ಅದುವರೆಗೆ ಎಲ್ಲರ ದೃಷ್ಟಿಯಲ್ಲೂ 'ಕುರೂಪಿಯಾದ ಬಾತುಮರಿ'ಯಾಗಿದ್ದ ಆ್ಯಂಡರ್ಸನ್ ತನ್ನ 'ಫೆಯ್ರಿ ಟೇಲ್ಸ್'ನಲ್ಲಿ ಪ್ರಕಟಪಡಿಸಿದ ಪರಿಪೂರ್ಣ ಗುಣಗಳಿಂದ ಲೋಕಕ್ಕೇ ರಾಜಹಂಸನಾದ.

ಸಮುದ್ರಕ್ಕೆ ಹಾರಿಕೊಂಡಳು; ತನ್ನ ದೇಹ ನೀರಿನಲ್ಲಿ ನೊರೆಯಾಗಿ ಕರಗಿ ಹೋಗುತ್ತಿದೆ ಎಂದು ಭಾವಿಸಿಕೊಂಡಳು.

ಸೂರ್ಯನು ಅಲೆಗಳನ್ನು ಬಿಟ್ಟು ಮೇಲೆದ್ದಾಗ, ಅವನ ಸುಖೋಷ್ಣವಾದ ಕಿರಣಗಳು ಮೀನಕನ್ಯೆಯು ಕೊರೆಯುವ ಮೈಮೇಲೆ ಬಿದ್ದಾಗ, ತಾನು ಸಾಯುತ್ತಿದ್ದೇನೆ ಎಂದು ಅವಳಿಗೆ ಎನ್ನಿಸಲಿಲ್ಲ. ಪ್ರಕಾಶಿಸುವ ಸೂರ್ಯನನ್ನು ಕಂಡಳು; ಗಾಜಿನ ಹಾಗೆ ಪಾರದರ್ಶಕವಾದ ಮೈಯುಳ್ಳ ನೂರಾರು ಆಕಾಶ ಜೀವಿಗಳು ತನ್ನ ಸುತ್ತಲೂ ತೇಲಿ ಹೋಗುತ್ತಿದ್ದುದನ್ನೂ ಕಂಡಳು; ಅವರ ಗಾಜಿನಂತಿದ್ದ ದೇಹಗಳ ಮೂಲಕವಾಗಿ ಹಡಗಿಗೆ ಕಟ್ಟಿದ್ದ ಪಟಗಳೂ ಆಕಾಶ ದಲ್ಲಿದ್ದ ಕೆಂಪು ಮೋಡಗಳೂ ಗೋಚರವಾಗುತ್ತಿದ್ದುವು. ಅವರ ಮಾತು ಮಧುರವಾಗಿತ್ತಾದರೂ ಮನುಷ್ಯರ ಕಿವಿಗಳಿಗೆ ಕೇಳಿಸದಷ್ಟು ಸೂಕ್ಷ್ಮ ವಾಗಿತ್ತು, ಅವರ ರೂಪು ಮನುಷ್ಯರ ಕಣ್ಣುಗಳಿಗೆ ಕಾಣದಷ್ಟು ಸೂಕ್ಷ್ಮ ವಾಗಿತ್ತು. ಮೀನಕನ್ಯೆ ಸಮುದ್ರದ ನೊರೆಯನ್ನು ಬಿಟ್ಟು ಮೇಲುಮೇಲಕ್ಕೆ ಏರಿದಳು. ಏರಿದಂತೆಲ್ಲ, ತನಗೂ ಆ ಆಕಾಶಜೀವಿಗಳ ಹಾಗೆಯೇ ಆಕಾಶ ದೇಹ ಬಂದುದನ್ನು ಕಂಡುಕೊಂಡಳು. ಅವಳ ಧ್ವನಿ ಕೂಡ ಉಳಿದವರ ಹಾಗೆಯೇ ಆಕಾಶಧ್ವನಿಯಾಗಿತ್ತು, ಎಲ್ಲ ಮನುಷ್ಯಧ್ವನಿಗಳನ್ನೂ ಮೀರಿಸಿ ಮಧುರವಾಗಿತ್ತು. ಮೀನಕನ್ಯೆ ಆಶ್ಚರ್ಯದಿಂದ "ನಾನು ಎಲ್ಲಿದ್ದೇನೆ?" ಎಂದಳು.

ಆಗ ಅವರಲ್ಲಿ ಒಬ್ಬಳು "ನೀನು ಆಕಾಶಕನ್ಯೆಯರ ನಡುವೆ ಇರುವೆ. ಮೀನಕನ್ಯೆಗೆ ಅಮೃತವಾದ ಆತ್ಮವಿಲ್ಲ, ಅವಳು ಮನುಷ್ಯಜೀವಿಯ ಪ್ರೇಮ ವನ್ನು ಸಂಪಾದಿಸಿದ ಹೊರತು ಅವಳಿಗೆ ಆತ್ಮ ಲಭಿಸುವಂತಿಲ್ಲ. ಅವಳ ಅದೃಷ್ಟದ ಸೂತ್ರಗಳೆಲ್ಲ ಪರರ ಕೈಯಲ್ಲಿವೆ. ಆದರೆ, ಆಕಾಶಕನ್ಯೆಯರಾದ ನಮಗೂ ಆತ್ಮವಿಲ್ಲದಿದ್ದರೂ, ನಾವು ಮಾಡುವ ಸತ್ಕಾರ್ಯಗಳ ಫಲವಾಗಿ ನಾವೂ ಆತ್ಮವನ್ನು ಸಂಪಾದಿಸಿಕೊಳ್ಳಬಲ್ಲೆವು. ನಾವು ಉಷ್ಣದೇಶಗಳಿಗೆ ಹಾರಿಹೋಗಿ, ಅಲ್ಲಿನ ಜನರನ್ನು ಕೊಲ್ಲುತ್ತಿರುವ ಬಿಸಿಲಿನ ತಾಪವನ್ನು ತಂಪು ಮಾಡುವೆವು. ಹೂಗಳ ಸುಗಂಧವನ್ನು ಹೊತ್ತುಕೊಂಡು ಹೋಗಿ, ಆರೋಗ್ಯ ವನ್ನು ಹರಡಿ, ಜನರಿಗೆ ಚೈತನ್ಯವನ್ನು ಎರೆಯುವೆವು. ಹೀಗೆ ನಮ್ಮ ಕೈಲಾದ

ಉಪಕಾರವನ್ನು ಮಾಡುತ್ತಾ ಮುನ್ನೂರು ವರ್ಷಗಳು ನಾವು ಪ್ರಯತ್ನಿಸಿದ ಬಳಿಕ ನಾವು ಕೂಡ ಅಮೃತವಾದ ಆತ್ಮವನ್ನು ಪಡೆಯುವೆವು, ಮನುಷ್ಯರು ಅನುಭವಿಸುವ ಸುಖವನ್ನು ನಾವೂ ಅನುಭವಿಸುವೆವು. ಪಾಪ, ಚಿಕ್ಕ ಮೀನಕನ್ಯೆಯಾದ ನೀನು ಕೂಡ ನಾವು ಪ್ರಯತ್ನಿಸುತ್ತಿರುವ ಹಾಗೆಯೇ ಹೃತ್ಪೂರ್ವಕವಾಗಿ ಪ್ರಯತ್ನಿಸಿರುವೆ; ದುಃಖಗಳನ್ನು ಅನುಭವಿಸಿ, ಅವುಗಳನ್ನು ಸಹಿಸಿ, ಮೀನಕನ್ಯೆಯಾಗಿದ್ದ ನೀನು ನಿನ್ನ ಸತ್ಕಾರ್ಯಗಳಿಂದ ಆಕಾಶಕನ್ಯೆಯ ಜನ್ಮಕ್ಕೆ ಏರಿರುವೆ. ಈಗಲೂ ಇದೇ ರೀತಿಯಲ್ಲಿ ಇನ್ನು ಮುನ್ನೂರು ವರ್ಷಗಳು ನೀನು ಪ್ರಯತ್ನಿಸಿದರೆ, ಅಮರವಾದ ಆತ್ಮವನ್ನು ನೀನು ಪಡೆಯಬಹುದು'' ಎಂದಳು

ಚಿಕ್ಕ ಮೀನಕನ್ಯೆ ದಿವ್ಯವಾದ ಕಾಂತಿ ತುಳುಕುತ್ತಿದ್ದ ತನ್ನ ಕಣ್ಣುಗಳನ್ನು ಸೂರ್ಯನ ಕಡೆಗೆ ಎತ್ತಿದಳು ಅದೇ ಆಗ ಮೊದಲನೆಯ ಬಾರಿ ಅವಳ ಕಣ್ಣು ತುಂಬ ಕಣ್ಣೀರು ತುಂಬಿಕೊಂಡಿತು ಕೆಳಗೆ, ತಾನು ಬಿಟ್ಟು ಬಂದ ಹಡಗಿನಲ್ಲಿ ಎಲ್ಲರೂ ಎದ್ದು ಓಡಾಡುತ್ತಿದ್ದುದನ್ನೂ, ರಾಜಕುಮಾರನೂ ಅವನ ಹೊಸ ಹೆಂಡತಿಯೂ ತನಗಾಗಿ ಹುಡುಕಾಡುತ್ತಿದ್ದುದನ್ನೂ ಅವಳು ಕಂಡಳು. ಮೀನಕನ್ಯೆ ಸಮುದ್ರಕ್ಕೆ ಹಾರಿಕೊಂಡುದನ್ನು ತಾವು ತಿಳಿದರೋ ಎಂಬಂತೆ ಅವರು ಮುತ್ತಿನ ಬಣ್ಣದ ನೊರೆಯನ್ನೇ ವ್ಯಸನದಿಂದ ನೋಡುತ್ತಿದ್ದುದನ್ನೂ ಕಂಡಳು ಅಗೋಚರಳಾಗಿ ಬಂದು, ಮದುಮಗಳ ಹಣೆಗೆ ಮುತ್ತಿಟ್ಟು, ರಾಜಕುಮಾರನಿಗೆ ಗಾಳಿ ಬೀಸಿ, ಉಳಿದ ಆಕಾಶಕನ್ಯೆಯರ ಜೊತೆಯಲ್ಲಿ ಮೇಲೇರಿ, ವಾಯುಮಾರ್ಗದಲ್ಲಿ ತೇಲಿಹೋಗುತ್ತಿದ್ದ ಒಂದು ಗುಲಾಬಿಬಣ್ಣದ ಮೋಡವನ್ನು ಸೇರಿದಳು.

"ಮುನ್ನೂರು ವರ್ಷಗಳು ಕಳೆದ ಮೇಲೆ ನಾವು ಹೀಗೇ ಸ್ವರ್ಗ ಸಾಮ್ರಾಜ್ಯಕ್ಕೆ ತೇಲಿಹೋಗುತ್ತೇವೆ" ಎಂದು ಮೀನಕನ್ಯೆ ಹೇಳಿದಳು. ಅದಕ್ಕೆ ಅವಳ ಜೊತೆಯಲ್ಲಿದ್ದ ಒಬ್ಬಳು ಆಕಾಶಕನ್ಯೆ "ನಾವು ಇನ್ನೂ ಮುಂಚೆಯೇ ಅಲ್ಲಿಗೆ ಹೋಗಬಹುದು. ನಾವು ಅಗೋಚರರಾಗಿ ಮನುಷ್ಯರ ಮನೆಗಳನ್ನು ಪ್ರವೇಶಿಸುವೆವು ಅಲ್ಲಿ ಮನೆಯ ತುಂಬ ಮಕ್ಕಳಿರುತ್ತಾರೆ. ತನ್ನ ತಂದೆತಾಯಿಗಳ ಕಣ್ಮಣಿಯಾಗಿ, ಅವರಿಗೆ ಪ್ರೀತಿಪಾತ್ರವಾದ ಮಗು

ವನ್ನು ನಾವು ಕಂಡ ಒಂದೊಂದು ದಿವಸಕ್ಕೂ ನಮ್ಮ ಮುನ್ನೂರು ವರ್ಷಗಳ ಅವಧಿಯಲ್ಲಿ ಒಂದೊಂದು ವರ್ಷ ಕಡಿಮೆಯಾಗುತ್ತದೆ. ಅಂಥ ಮಗುವಿರುವ ಮನೆಯೊಳಗೆ ಹಾರಾಡುತ್ತ, ಮಗುವಿನ ಒಳ್ಳೆಯ ನಡತೆಯಿಂದ ನಮಗೆ ಒಂದು ವರ್ಷ ಉಳಿಯಿತೆಂದು ನಾವು ಹಿಗ್ಗುವುದನ್ನು ಆ ಮಗು ಅರಿಯದು. ಆದರೆ ತುಂಟಮಗುವನ್ನೋ ದುಷ್ಟ ಮಗುವನ್ನೋ ಕಂಡಾಗ ಮಾತ್ರ ನಾವು ದುಃಖದಿಂದ ಕಣ್ಣೀರು ಕರೆಯುತ್ತೇವೆ. ಏಕೆಂದರೆ, ಆಗ ಮಾತ್ರ ಒಂದೊಂದು ಕಣ್ಣೀರಿನ ಹನಿಗೂ ಒಂದೊಂದು ದಿವಸ ಕೂಡಿಬಂದು, ನಾವು ಕಾಯಬೇಕಾದ ಅವಧಿ ಹೆಚ್ಚುತ್ತದೆ" ಎಂದು ಪಿಸುಗುಟ್ಟಿದಳು

# ಕುರೂಪಿಯಾದ ಮರಿಬಾತು

ವೈಶಾಖಮಾಸದ ಹಿತವಾದ ಬಿಸಿಲು. ಹಳ್ಳಿಯ ಕಡೆ ಚಿನ್ನದ ತೆನೆಗಳೂ ಹಸಿರು ಪಯಿರೂ ಕಣಗಳಲ್ಲಿ ಒಟ್ಟಿದ್ದ ಹುಲ್ಲುಮೆದೆಗಳೂ ಕಣ್ಣಿಗೆ ಸುಂದರವಾಗಿತ್ತು. ತನ್ನ ಉದ್ದವಾದ ಕೆಂಪುಕಾಲುಗಳನ್ನು ಬೀಸಿಕೊಂಡು ನಡೆಯುತ್ತಿದ್ದ ಕೊಕ್ಕರೆ ತನ್ನ ತಾಯಿಯಿಂದ ಕಲಿತ ಮಾತುಗಳನ್ನು ಒದರುತ್ತ ಹೋಗುತ್ತಿತ್ತು. ಹೊಲ ಗದ್ದೆಗಳ ಸುತ್ತಲೂ ದೊಡ್ಡ ದೊಡ್ಡ ಕಾಡು, ಅದರ ನಡುವೆ ಆಳವಾದ ಕೊಳಗಳು. ನಿಜವಾಗಿಯೂ ಆ ಕಡೆ ನಡೆದಾಡುವುದೇ ಒಂದು ಸಂತೋಷ.

ಅಲ್ಲಿ ಬಿಸಿಲು ಬೀಳುವ ಕಡೆ, ಆಳವಾದ ಹೊಳೆಯ ಹತ್ತಿರದಲ್ಲಿ ಒಂದು ಹೊಲಮನೆ. ಆ ಮನೆಯಿಂದ ನೀರಿನವರೆಗೂ ದೊಡ್ಡ ದೊಡ್ಡ ಎಲೆಗಳು ಬೆಳೆದಿದ್ದುವು, ಒಂದೊಂದು ಎಲೆಯ ಕೆಳಗೆ ಒಂದೊಂದು ಬೆಳೆದ ಮಗು ನಿಂತುಕೊಳ್ಳಬಹುದಾಗಿತ್ತು. ಆ ಪ್ರದೇಶ ಗೊಂಡಾರಣ್ಯದ ಮಧ್ಯದಲ್ಲಿ ಇದ್ದ ಹಾಗೆ ಕಾಡುಕಾಡಾಗಿತ್ತು.

ಹೀಗೆ ಹಿತವಾಗಿ ಹುದುಗಿಕೊಂಡಿದ್ದ ಮೂಲೆಯಲ್ಲಿ ಒಂದು ಹೆಣ್ಣು ಬಾತು ತನ್ನ ಗೂಡಿನಲ್ಲಿ ಮೊಟ್ಟೆಗಳಿಗೆ ಕಾವು ಕೊಡುತ್ತ ಕುಳಿತಿತ್ತು. ಮೊಟ್ಟೆಗಳು ಒಡೆದು ಮರಿಗಳು ಹೊರಗೆ ಬರುವುದು ತಡವಾದ್ದರಿಂದಲೂ ತನ್ನನ್ನು ಮಾತನಾಡಿಸುವುದಕ್ಕೆ ಯಾರೂ ಸ್ನೇಹಿತರು ಬರದೆ ಇದ್ದುದರಿಂದಲೂ ಅದಕ್ಕೆ ತುಂಬಾ ಬೇಸರವಾಗಿತ್ತು. ಇತರ ಬಾತುಗಳಿಗಾದರೋ ಆ ತಾಯಿಬಾತು ಕುಳಿತಿದ್ದ ಕೆಸರಿನ ದಂಡೆಗೆ ಹತ್ತಿಬಂದು ಅದರೊಡನೆ ಹರಟೆ ಹೊಡೆಯುವುದಕ್ಕಿಂತ ನೀರಿನಲ್ಲಿ ತಮ್ಮ ಪಾಡಿಗೆ ತಾವು ಈಜಾಡುವುದೇ ಹೆಚ್ಚು ಇಷ್ಟವಾಗಿತ್ತು.

ಕಟ್ಟಕಡೆಗೆ, ಒಂದು ದಿನ ಒಂದು ಮೊಟ್ಟೆ ಬಿರಿಯಿತು. ಅನಂತರ ಇನ್ನೊಂದು. ಹೀಗೆ ಒಂದೊಂದು ಮೊಟ್ಟೆಯಿಂದ ಒಂದೊಂದು ಮರಿ ತಲೆಯೆತ್ತಿ 'ಕೀಚ್, ಕೀಚ್' ಎಂದು ಕೂಗಿತು. ತಾಯಿಬಾತು "ಕ್ವ್ಯಾಕ್,

ಕ್ವ್ಯಾಕ್" ಎಂದಿತು, ಮರಿಗಳು ತಾವೂ ತಮ್ಮ ಕೈಲಾದ ಮಟ್ಟಿಗೆ ಕ್ವ್ಯಾಕ್, ಕ್ವ್ಯಾಕ್' ಎಂದು ಶಬ್ದಮಾಡಿ, ಎಲೆಗಳ ಅಡಿಯಿಂದ ಸುತ್ತಲೂ ನೋಡಿದುವು. ತಾಯಿಬಾತು "ನೋಡಲಿ. ನೋಡಲಿ ಬೇಕಾದಷ್ಟು ನೋಡಲಿ. ಕಣ್ಣಿಗೆ ಹಸಿರ ಬಹಳ ಒಳ್ಳೆಯದು" ಎಂದು ಸುಮ್ಮನಿತ್ತು ಮರಿಬಾತುಗಳು ಮೊಟ್ಟೆಯೊಳಗೆ ಇದ್ದುದಕ್ಕಿಂತ ಹೆಚ್ಚು ಅವಕಾಶ ದೊರೆತುದನ್ನು ಕಂಡು "ಎಷ್ಟು ದೊಡ್ಡದು ಈ ಪ್ರಪಂಚ!" ಎಂದು ಆಶ್ಚರ್ಯಪಟ್ಟುವು ಅದಕ್ಕೆ ತಾಯಿಬಾತು "ಏನು? ಇದಿಷ್ಟೇ ಸಂಪೂರ್ಣ ಪ್ರಪಂಚವೆಂದು ತಿಳಿದು ಕೊಂಡಿದ್ದೀರೇನು? ಆಚೆಯ ತೋಟವನ್ನು ನೋಡುವವರೆಗೆ ಸ್ವಲ್ಪ ತಾಳಿ. ಇನ್ನೂ ಆಚೆ, ಆ ದೇವಸ್ಥಾನದ ಹೊಲಗಳವರೆಗೂ ಇದೆ. ಆದರೆ ನಾನು ಇನ್ನೂ ಅಷ್ಟುದೂರ ಹೋಗಲು ನನಗೆ ಧೈರ್ಯ ಬಂದಿಲ್ಲ" ಎಂದು. ಹೀಗೆ, "ಎಲ್ಲ? ಎಲ್ಲರೂ ಮೊಟ್ಟೆಯಿಂದ ಹೊರಗೆ ಬಂದಾಯಿತೇನು?" ಎಂದು ಕೇಳುತ್ತ ಮೇಲೆದ್ದಿತು ಆದರೆ ಅಷ್ಟರಲ್ಲಿ 'ಛೆ! ಛೆ! ಇದೇನಿದು? ಎಲ್ಲ ಕ್ಕಿಂತ ದೊಡ್ಡ ಮೊಟ್ಟೆ ಇನ್ನೂ ಹಾಗೇ ಇದೆ ಇನ್ನು ಇದಕ್ಕೆ ಎಷ್ಟು ದಿವಸ ಬೇಕೊ? ನನಗಂತೂ ಸಾಕಾಗಿ ಹೋಗಿದೆ" ಎಂದು ಪುನಃ ಆ ಮೊಟ್ಟೆಯ ಮೇಲೆ ತಾವು ಕುಳಿತುಕೊಂಡಿತು

ಆ ತಾಯಿಬಾತನ್ನು ನೋಡಿಕೊಂಡು ಹೋಗುವುದಕ್ಕೆ ಒಂದು ಮುದಿ ಬಾತು ಬಂತು "ಏನು? ಹೇಗಿವೆ ನಿನ್ನ ಮೊಟ್ಟೆಗಳು?" ಎಂದು ಕೇಳಿತು.

"ಒಂದು ಮೊಟ್ಟೆ ಇನ್ನೂ ಮರಿಯಾಗಿಲ್ಲ ಏಕೋ ಇನ್ನೂ ಮೊಟ್ಟೆ ಬಿರಿದಿಲ್ಲ ಆದರೆ, ಈ ಮಿಕ್ಕ ಮರಿಗಳನ್ನು ನೋಡು ಇವುಗಳಷ್ಟು ಮುದ್ದಾದ ಬಾತುಮರಿಗಳನ್ನು ನೀನು ಎಲ್ಲಿಯಾದರೂ ಕಂಡಿರುವೆಯ? ಇವು ತಂದೆಯ ಹಾಗೆಯೇ ಇವೆ ಅಲ್ಲವೆ? ಆ ತಂದೆಯೋ ನನ್ನ ಮುಖಕೂಡ ನೋಡುವುದಿಲ್ಲ" ಎಂದು ತಾಯಿಬಾತು ಹೇಳಿತು

ಮುದಿಬಾತು "ಎಲ್ಲಿ, ಆ ಮರಿಯಾಗದ ಮೊಟ್ಟೆಯನ್ನು ನೋಡೋಣ" ಎಂದು ಬಂದು ನೋಡಿ, "[illegible] ... ವಿಷ ... ಟರ್ಕಿ ಕೋಳಿಯ ಮೊಟ್ಟೆ ಒಂದು [illegible] ... ಕ್ಕಾಗೆ ತಾವು ಕೂತು ಮರಿ

ಮಾಡಬೇಕಾಯಿತು. ಆ ಮರಿಗಳನ್ನು ಎಷ್ಟೇ ಜೋಪಾನದಿಂದ ಬೆಳೆಸಿದರೂ ನೀರು ಕಂಡರೆ ಬೆದರುತ್ತಿದ್ದುವು. ನಾನೂ ಎಷ್ಟೋ ಕೂಗಿದೆ, ಗದರಿಸಿದೆ, ಏನೂ ಪ್ರಯೋಜನವಾಗಲಿಲ್ಲ. ಅವು ನೀರಿನೊಳಕ್ಕೆ ಕಾಲೇ ಇಡಲಿಲ್ಲ ಎಲ್ಲಿ, ಇನ್ನೊಂದು ಸಲ ನೋಡೋಣ ಹೌದು. ಇದು ಟರ್ಕಿಕೋಳಿಯ ಮೊಟ್ಟೆ, ಖಂಡಿತ. ನನ್ನ ಮಾತು ಕೇಳು, ಇದನ್ನು ಇಲ್ಲಿಯೇ ಎಸೆದು, ಮಿಕ್ಕ ಮರಿಗಳಿಗೆ ಈಜು ಕಲಿಸು, ಹೋಗು'' ಎಂದಿತು.

"ಇಲ್ಲ, ಇನ್ನೂ ಸ್ವಲ್ಪ ಹೊತ್ತು ಕಾವು ಕೂರುತ್ತೇನೆ ಇಷ್ಟು ದಿನಗಳೇ ಕುಳಿತಿದ್ದೆನಂತೆ, ಇನ್ನೆರಡು ದಿನ ಕುಳಿತರೆ ಏನು ನಷ್ಟ!'' ಎಂದು ತಾಯಿ ಬಾತು ಹೇಳಿತು.

"ಸರಿ, ನಿನ್ನ ಇಷ್ಟ'' ಎಂದು ಹೇಳಿ, ಮುದಿಬಾತು ಹೊರಟು ಹೋಯಿತು

ಕೊನೆಗೆ ಒಂದು ದಿನ ಆ ಮೊಟ್ಟೆ ಬಿರಿಯಿತು, ಮರಿ 'ಕೀಚ್! ಕೀಚ್!' ಎನ್ನುತ್ತ ಹೊರಗೆ ಬಂತು. ಆ ಮರಿಯೋ ತುಂಬ ದೊಡ್ಡದಾಗಿತ್ತು, ತುಂಬ ಕುರೂಪಿಯಾಗಿತ್ತು ತಾಯಿಬಾತು ಅದನ್ನು ದುರುಗುಟ್ಟಿಕೊಂಡು ನೋಡಿ, "ಏನು, ಇಷ್ಟು ದೊಡ್ಡದಾಗಿದೆ? ಅಲ್ಲದೆ, ಮಿಕ್ಕವುಗಳ ಹಾಗೂ ಇಲ್ಲ. ನಿಜವಾಗಿ ಇದೇನಾದರೂ ಟರ್ಕಿಕೋಳಿಯೇ ಇರಬಹುದೆ? ನೋಡೋಣ, ನೀರಿನ ಹತ್ತಿರ ಹೋದಾಗ ಗೊತ್ತಾಗುತ್ತದೆ ಹಾಗೇನಾದರೂ ತಾನಾಗಿಯೇ ನೀರಿಗೆ ಇಳಿಯದಿದ್ದರೆ ನಾನೇ ತಳ್ಳಿಬಿಡುತ್ತೇನೆ" ಎಂದು ಕೊಂಡಿತು.

ಮಾರನೆಯ ದಿನ ಬಿಸಿಲೂ ಗಾಳಿಯೂ ಹಿತವಾಗಿತ್ತು, ಸೂರ್ಯನ ಪ್ರಕಾಶ ಹಸಿರುಎಲೆಗಳನ್ನು ತೊಳೆಯುತ್ತಿತ್ತು ತಾಯಿಬಾತು ತನ್ನ ಮರಿಗಳ ಬಳಗ ವನ್ನು ಕರೆದುಕೊಂಡು ಪಳಕ್ಕನೆ ನೀರಿಗೆ ದುಮುಕಿ, "ಕ್ವ್ಯಾಕ್, ಕ್ವ್ಯಾಕ್!" ಎಂದು ಕೂಗಿದಾಗ ಆ ಮರಿಬಾತುಗಳೂ ಒಂದರ ಹಿಂದೆ ಒಂದು ಪಳಕ್ಕನೆ ದುಮುಕಿದವು. ನೀಳಿದ ನೀರು [illegible] ಅವುಗಳ ತಲೆಯ ಮೇಲೆ ಸೇರಿ ಕೊಂಡರೂ ಅವು ಮರುಕ್ಷಣದಲ್ಲೇ [illegible] ಮೇಲೆ ತಲೆಯೆತ್ತಿ ತಮ್ಮ ಕಾಲು

ಗಳಲ್ಲಿ ನೀರನ್ನು ಮುದ್ದಾಗಿ ಬಗೆಯುತ್ತ ಈಜಾಡಿದಾಗ, ಆ ಕುರೂಪಿಯಾದ ಮರಿಬಾತು ತಾನೂ ಅವುಗಳ ಜೊತೆಯಲ್ಲಿ ಈಜುತ್ತಿತ್ತು

"ಓ! ಇದು ಟರ್ಕಿಕೋಳಿ ಅಲ್ಲ! ಅದು ಕಾಲು ಬೀಸುವುದು ನೋಡು! ಅದು ನೆಟ್ಟಗೆ ನಿಲ್ಲುವ ನಿಲುವು ನೋಡು! ಇದು ನನ್ನ ಸ್ವಂತ ಮಗು, ಸರಿಯಾಗಿ ನೋಡಿದರೆ ಅಷ್ಟೇನೂ ಕುರೂಪಿಯಲ್ಲ" ಎಂದು ತಾಯಿ ಬಾತು ತನಗೆ ತಾನೇ ಹೇಳಿಕೊಂಡು, "ಕ್ವ್ಯಾಕ್! ಕ್ವ್ಯಾಕ್! ಬನ್ನಿ, ಬನ್ನಿ, ನನ್ನ ಜೊತೆಯಲ್ಲಿ ಬನ್ನಿ ನಿಮಗೆ ಸರಿಯಾದ ಸಮಾಜದಲ್ಲಿ ಪರಿಚಯ ಮಾಡಿಕೊಡುತ್ತೇನೆ ಹೊಲಮನೆಯ ಅಂಗಳಕ್ಕೆ ಹೋಗೋಣ ಬನ್ನಿ ಆದರೆ, ಜೋಪಾನ, ಯಾರಾದರೂ ನಿಮ್ಮನ್ನು ತುಳಿದುಬಿಟ್ಟಾರು! ಜೋಪಾನ, ಬೆಕ್ಕು ಬಂದು ಹಿಡಿದೀತು!" ಎಂದು ಮರಿಗಳನ್ನು ಕರೆಯಿತು.

ಅವುಗಳೆಲ್ಲ ಆ ಹೊಲಮನೆಯ ಅಂಗಳಕ್ಕೆ ಬರುವ ವೇಳೆಗೆ ದೊಡ್ಡ ಗಲಭೆಯಾಗುತ್ತಿತ್ತು ಒಂದು ಮಣ್ಣುಹುಳುವಿನ ತಲೆಗೋಸ್ಕರ ಎರಡು ಕೋಳಿ ಸಂಸಾರಗಳು ಕಾದಾಡುತ್ತಿದ್ದುವು. ಅದನ್ನು ಕೊನೆಗೆ ಬೆಕ್ಕು ಹಾರಿಸಿಕೊಂಡು ಹೋಯಿತು ತಾಯಿಬಾತು ಅದನ್ನು ಕಂಡು, "ಆ ಮಣ್ಣುಹುಳು ನನಗೆ ಸಿಕ್ಕಿದ್ದರೆ ಎಷ್ಟು ಚೆನ್ನಾಗಿರುತ್ತಿತ್ತು" ಎಂದು ಕೊಕ್ಕು ಚಪ್ಪರಿಸಿಕೊಂಡು, "ನೋಡಿದಿರಾ ಮಕ್ಕಳೆ! ಲೋಕವೇ ಹೀಗೆ ಇಬ್ಬರ ಜಗಳ ಮೂರನೆಯವರ ಲಾಭ" ಎಂದು ಹೇಳುತ್ತ, "ಬನ್ನಿ, ಬನ್ನಿ, ಸರಿಯಾಗಿ ಕಾಲುಹಾಕಿ ಘನವಾಗಿ ನಡೆದುಕೊಳ್ಳಿ. ಅಲ್ಲಿ ದೂರದಲ್ಲಿ ಕುಳಿತಿರುವ ಮುದಿಬಾತಿಗೆ ತಲೆಬಗ್ಗಿ ನಮಸ್ಕಾರ ಮಾಡಿ ಅದು ಸಾಕ್ಷಾತ್ ಸ್ಪೈಯಿನ್ ದೇಶದಿಂದ ಬಂದ ಬಾತು ಅದರ ಕಾಲಿಗೆ ಒಂದು ಕೆಂಪು ರಿಬ್ಬನ್ ಕಟ್ಟಿದ್ದಾರೆ, ನೋಡಿ, ಅದೇ ಅದರ ದೊಡ್ಡ ವಂಶಕ್ಕೆ ಗುರುತು. ಅದು ಎಲ್ಲಿಯಾದರೂ ತಪ್ಪಿಸಿಕೊಂಡರೆ ಆ ಕೆಂಪು ರಿಬ್ಬನ್ನಿನಿಂದ ಅದನ್ನು ಪತ್ತೆಮಾಡಬಹುದು ಎಲ್ಲಿ, ಎಲ್ಲಿ, ಹೆಜ್ಜೆಗಳನ್ನು ದೂರ ದೂರ ಇಟ್ಟು ನಡೆಯಬೇಕು. ನಿಮ್ಮ ತಂದೆ ತಾಯಿ ನಡೆದ ಹಾಗೆ ನಡೆಯಬೇಕು. ಎಲ್ಲಿ, ಕತ್ತು ಬಗ್ಗಿಸಿ 'ಕ್ವ್ಯಾಕ್' ಎಂದು ಹೇಳಿ. ನೋಡೋಣ" ಎಂದು ಮರಿಗಳನ್ನು ಕರೆಯಿತು.

ಮರಿಬಾತುಗಳು ತಾಯಿ ಹೇಳಿದಂತೆಯೇ ನಡೆದುಕೊಂಡವು. ಆದರೆ ಅಲ್ಲಿದ್ದ ಇತರ ಬಾತುಗಳು ಅವುಗಳನ್ನು ದುರುಗುಟ್ಟಿಕೊಂಡು ನೋಡಿ, "ಸರಿ ನಾವು ಇರುವುದು ಸಾಲದು ಎಂದು ಇದೊಂದು ಹೊಸ ಹಿಂಡು ಬಂತು. ಅವುಗಳ ನಡುವೆ ಇದು ಯಾವುದು ವಿಚಿತ್ರ ಪ್ರಾಣಿ? ಈ ಕುರೂಪಿಯನ್ನು ನಾವು ಇಲ್ಲಿ ಸೇರಿಸುವುದಿಲ್ಲ" ಎಂದವು. ಅವುಗಳಲ್ಲಿ ಒಂದು ಹಾರಿ ಬಂದು, ಆ ಕುರೂಪಿಯಾದ ಮರಿಬಾತಿನ ಕತ್ತಿನ ಮೇಲೆ ಕಚ್ಚಿತು.

"ಪಾಪ, ಅದರ ತಂಟೆಗೆ ಏಕೆ ಹೋಗುತ್ತೀರಿ? ನಿಮಗೆ ಅದು ಏನು ತೊಂದರೆ ಮಾಡಿತು?" ಎಂದಿತು ತಾಯಿ ಬಾತು.

ಅದಕ್ಕೆ ಆ ಕಚ್ಚಿದ ಬಾತು "ನಿಜವೇ. ಆದರೆ ಅದು ಅಷ್ಟು ದೊಡ್ಡದಾಗಿದೆ, ಅಷ್ಟು ಕುರೂಪಿಯಾಗಿದೆ. ಆದ್ದರಿಂದಲೇ ಅದನ್ನು ಇಲ್ಲಿಂದ ಒದ್ದು ಓಡಿಸಬೇಕು" ಎಂದಿತು.

ಕಾಲಿಗೆ ಕೆಂಪು ರಿಬ್ಬನ್ನು ಕಟ್ಟಿಕೊಂಡಿದ್ದ ಮುದಿಬಾತು "ಹೌದು. ಅದೊಂದು ಹೊರತು ಉಳಿದ ಮಕ್ಕಳೆಲ್ಲ ಮುದ್ದಾಗಿವೆ. ತಾಯಿಯಾದವಳು ಇದನ್ನೂ ಸ್ವಲ್ಪ ತಿದ್ದಬೇಕು" ಎಂದಿತು.

"ಅದು ಸಾಧ್ಯವೇ ಇಲ್ಲ, ಅಮ್ಮಯ್ಯ. ಅದು ಇರುವುದೇ ಹಾಗೆ. ಆದರೆ ಅದರ ಸ್ವಭಾವ ಬಹಳ ಒಳ್ಳೆಯದು. ಅಲ್ಲದೆ ಉಳಿದವರಿಗಿಂತ ಚೆನ್ನಾಗಿ ಈಜುತ್ತದೆ. ಬೆಳೆಯುತ್ತ ಬೆಳೆಯುತ್ತ ಇದೂ ಮುದ್ದಾಗಬಹುದು, ಸಣ್ಣಗೂ ಆಗಬಹುದು. ಮೊಟ್ಟೆಯೊಳಗೇ ಬಹಳ ದಿವಸ ಇದ್ದುದರಿಂದ ಮೈ ಸರಿಯಾಗಿ ಬೆಳವಣಿಗೆಯಾಗಿಲ್ಲ" ಎಂದು ಹೇಳಿ, ಆ ತಾಯಿಬಾತು ಆ ಮರಿಯ ಕೊರಳನ್ನು ಸವರಿ, ಅದರ ರೆಕ್ಕೆಪುಕ್ಕಗಳನ್ನು ಸರಿಮಾಡುತ್ತ "ಇದು ಗಂಡು ಬಾತು. ಆದ್ದರಿಂದ ಇದರ ರೂಪ ಹೇಗಿದ್ದರೆ ಏನು? ಬೆಳೆದು ಬಲವಾಗಿ ತನ್ನನ್ನು ತಾನು ಕಾಪಾಡಿಕೊಳ್ಳುತ್ತದೆ" ಎಂದಿತು.

ಮುದಿಬಾತು "ಉಳಿದ ಮರಿಗಳ ನಡಿಗೆ ಬಹಳ ನಾಜೂಕಾಗಿದೆ. ಬನ್ನಿ, ಎಲ್ಲರೂ ಬನ್ನಿ. ಇದು ನಿಮ್ಮ ಮನೆಯೆಂದೇ ಭಾವಿಸಿಕೊಳ್ಳಿ. ನಿಮಗೆ

ಯಾವುದಾದರೂ ಮಣ್ಣುಹುಳು ಸಿಕ್ಕಿದರೆ, ಅದನ್ನು ನನಗೆ ತಂದುಕೊಡ ಬಹುದು'' ಎಂದಿತು.

ತಾಯಿಬಾತೂ ಅದರ ಮರಿಗಳೂ ಸಂಕೋಚವಿಲ್ಲದೆ ಅಲ್ಲಿ ಓಡಿಯಾಡ ತೊಡಗಿದವು. ಆದರೆ ಎಲ್ಲ ಮರಿಗಳಿಗಿಂತ ಕಡೆಯಲ್ಲಿ ತನ್ನ ಮೊಟ್ಟೆಯಿಂದ ಹೊರಗೆ ಬಂದ ಆ ಕುರೂಪಿಯಾದ ಮರಿಬಾತುವನ್ನು ಅಲ್ಲಿದ್ದ ಬಾತುಗಳು ಮಾತ್ರವಲ್ಲದೆ ಕೋಳಿಗಳು ಕೂಡ ಕಚ್ಚಿ, ತಳ್ಳಿ, ಅಣಕಿಸಿದುವು "ದೊಣ್ಣೆ, ಥಡಿಯ, ಧಾಂಡಿಗ'' ಎಂದು ಎಲ್ಲವೂ ಅದನ್ನು ಛೀಗುಟ್ಟಿದುವು ಅಂಗಳ ದಲ್ಲಿದ್ದ ಟರ್ಕಿಹುಂಜ ತಾನು ಒಬ್ಬ ದೊಡ್ಡ ಚಕ್ರವರ್ತಿಯೆಂದು ತಿಳಿದು ಕೊಂಡಿತ್ತು, ಅದು ಗಾಳಿ ತುಂಬಿದ ಹಡಗಿನ ಹಾಯಿಪಟದ ಹಾಗೆ ತನ್ನ ಎದೆಯುಬ್ಬಿಸಿಕೊಂಡು ಹಾರಿಬಂದು ಆ ಮರಿಬಾತಿನ ಮೇಲೆ ಎರಗಿತು. ಪಾಪ, ಆ ಕುರೂಪಿಯಾದ ಮರಿಬಾತಿಗೆ ತಾನು ಎಲ್ಲಿ ಹೋಗಬೇಕೋ, ಏನು ಮಾಡಬೇಕೋ ಒಂದೂ ತೋಚಲಿಲ್ಲ ತಾನು ಕುರೂಪಿ, ತನ್ನನ್ನು ಕಂಡ ವರೆಲ್ಲರೂ ಹಾಸ್ಯಮಾಡಿ ನಗುತ್ತಾರೆ ಎಂದು ತುಂಬ ಪೇಚಾಡಿಕೊಂಡಿತು.

ಪ್ರತಿದಿನವೂ ಹೀಗೇ ನಡೆಯಿತು. ದಿನ ಕಳೆದ ಹಾಗೆಲ್ಲ ಕಿರುಕುಳ ಇನ್ನೂ ಹೆಚ್ಚಾಯಿತು ಪ್ರತಿಯೊಬ್ಬರೂ, ಪಾಪ, ಆ ಬಾತನ್ನು ಅಟ್ಟುವವರೇ ಅದರ ಅಣ್ಣಂದಿರೂ ಅಕ್ಕಂದಿರೂ ಕೂಡ 'ಅಯ್ಯೋ ಪಾಪ' ಎನ್ನದೆ "ಥೂ ಕುರೂಪಿ! ಬೆಕ್ಕಾದರೂ ನಿನ್ನನ್ನು ತಿಂದುಹಾಕಿಬಿಡಬಾರದೆ?'' ಎಂದುವು "ನೀನು ಹುಟ್ಟದ ಇದ್ದಿದ್ದರೆ ಚೆನ್ನಾಗಿರುತ್ತಿತ್ತು" ಎಂದು ತಾಯಿಬಾತು ಹೇಳಿತು. ಬಾತುಗಳು ಅದನ್ನು ಕುಕ್ಕಿದುವು, ಕೋಳಿಪಿಳ್ಳೆಗಳು ಅದನ್ನು ಬಡಿದುವು, ಕೋಳಿಗೆ ಕಾಳು ಎರಚಲು ಬಂದ ಹುಡುಗಿ ಅದನ್ನು ಕಾಲಿನಿಂದ ಒದ್ದಳು ಕಡೆಗೆ ಒಂದು ದಿನ ಆ ಕಾಟವನ್ನು ತಡೆಯಲಾರದೆ ಮರಿಬಾತು ಬೇಲಿಯನ್ನು ದಾಟಿಕೊಂಡು ಹಾರಿ ಓಡಿಹೋಯಿತು. ಅದು ಹಾರಿದಾಗ ಬೇಲಿಯಲ್ಲಿ ಕುಳಿತಿದ್ದ ಚಿಕ್ಕ ಹಕ್ಕಿಗಳು ಹೆದರಿಕೊಂಡವು.

"ನನ್ನ ಕುರೂಪವನ್ನು ಕಂಡು ಇವು ಕೂಡ ಹೆದರಿಕೊಳ್ಳುತ್ತವೆ" ಎಂದು ಮರಿಬಾತು ಕಣ್ಣು ಮುಚ್ಚಿಕೊಂಡು ಹಾರಿ, ಹಾರಿ, ಕಾಡುಬಾತುಗಳು

ಓಡಿಯಾಡುತ್ತಿದ್ದ ಒಂದು ಕ್ಷೇತ್ರಕ್ಕೆ ಬಂತು. ರಾತ್ರಿಯೆಲ್ಲ ಬಹಳ ಆಯಾಸ ಪಡುತ್ತ, ವ್ಯಸನಪಡುತ್ತ, ಅಲ್ಲೇ ಇತ್ತು

ಬೆಳಗ್ಗೆ ಕಾಡುಬಾತುಗಳು ಹಾರಿಹೋಗಲು ಮೇಲೆದ್ದಾಗ ಈ ಹೊಸ ಹಕ್ಕಿಯನ್ನು ಕಂಡು ಕಣ್ಣುಬಿಟ್ಟುವು "ನೀನು ಎಂಥ ಬಾತೊ, ನೀನು ?" ಎಂದು ಅದರ ಸುತ್ತ ಮುತ್ತಿಕೊಂಡು ಕೇಳಿದುವು

ಇದು ಆದಷ್ಟು ವಿನಯದಿಂದ ಬಗ್ಗಿ ಅವುಗಳಿಗೆ ನಮಸ್ಕಾರಮಾಡಿತು. ಆದರೆ ಅವು ಕೇಳಿದ ಪ್ರಶ್ನೆಗೆ ಉತ್ತರ ಕೊಡಲಿಲ್ಲ

"ನೀನು ತುಂಬ ಕುರೂಪಿ ಆದರೇನು? ನಮ್ಮ ವಂಶದೊಡನೆ ನೀನು ಮದುವೆಯ ಸಂಬಂಧ ಬೆಳೆಸದೆ ಇದ್ದರ ಸರಿ!'' ಎಂದು ಕಾಡುಬಾತುಗಳು ಹೇಳಿದುವು.

ಪಾಪ, ಆ ಮರಿಬಾತಿಗೆ ಮದುವೆಯ ಯೋಚನೆ ಏನು ಬೇಕಾಗಿತ್ತು! ಸದ್ಯಃ, ನೆಲದ ಜೊಂಡಿನ ಮಧ್ಯೆ ಮಲಗಿ, ಅಲ್ಲಿ ನಿಂತ ನೀರನ್ನು ಕುಡಿದುಕೊಂಡರೆ, ಅಷ್ಟೇ ಅದಕ್ಕೆ ಸಾಕಾಗಿತ್ತು.

ಹೀಗೆ ಆ ಕ್ಷೇತ್ರದಲ್ಲಿ ಎರಡು ದಿವಸ ಇದ್ದ ಮೇಲೆ ಎರಡು ಕಾಡುಬಾತು ಮರಿಗಳು ಬಂದುವು. ಅವು ಮೊಟ್ಟೆಯಿಂದ ಈಚೆ ಬಂದು ಹೆಚ್ಚು ದಿನಗಳಾಗಿರಲಿಲ್ಲ, ಆದರೂ ಪ್ರತಿಷ್ಠೆ ತುಂಬ ಅವುಗಳಲ್ಲಿ ಒಂದು ಈ ಮರಿಬಾತನ್ನು ಕುರಿತು "ಏ! ನೀನು ಇಷ್ಟು ಕುರೂಪಿಯಾಗಿದ್ದರೂ ನಿನ್ನನ್ನು ಕಂಡರೆ ನಮಗೆ ತುಂಬ ಇಷ್ಟ ನಮ್ಮ ಜೊತೆಗೆ ಬರುವೆಯೇನು, ಹೇಳು? ಇಲ್ಲಿಂದ ಆಚೆ ಇನ್ನೊಂದು ಕ್ಷೇತ್ರವಿದೆ. ಅಲ್ಲಿ ಕೆಲವು ಮುದ್ದಾದ ಕಾಡುಬಾತುಗಳಿವೆ. ಅವುಗಳಿಗೆ ಇನ್ನೂ ಮದುವೆಯಾಗಿಲ್ಲ. ನೀನು ಬರುವುದಾದರೆ, ನೀನು ಕುರೂಪಿಯಾಗಿದ್ದರೂ ನಿನ್ನ ಅದೃಷ್ಟ ಹೇಗಿದೆಯೊ? ನಿನಗೂ ಒಂದು ಹೆಂಡತಿ ಸಿಕ್ಕಬಹುದು" ಎಂದಿತು.

"ಟಪ್, ಟಪ್'' ಎಂದು ಗಾಳಿಯಲ್ಲಿ ಸದ್ದಾಯಿತು, ಎರಡು ಕಾಡು ಬಾತುಗಳು ಜೊಂಡಿನ ನಡುವೆ ಸತ್ತುಬಿದ್ದುವು, ನೀರೆಲ್ಲ ರಕ್ತದ ಬಣ್ಣ

ವಾಯಿತು. "ಟಪ್, ಟಪ್" ಎಂಬ ಶಬ್ದ ಎಲ್ಲ ದಿಕ್ಕಿನಲ್ಲಿಯೂ ಪ್ರತಿಧ್ವನಿಸಿ ಕೊಟ್ಟಿತು, ಕಾಡುಬಾತುಗಳು ಹಿಂಡುಹಿಂಡಾಗಿ ಜೊಂಡಿನ ಮರೆಯಿಂದ ಮೇಲೆ ಹಾರಿದುವು. 'ಟಪ್, ಟಪ್' ಶಬ್ದ ಎಲ್ಲ ದಿಕ್ಕುಗಳಿಂದಲೂ ಪುನಃ ಪುನಃ ಕೇಳಿ ಬಂತು ಬಾತುಗಳನ್ನು ಬೇಟೆಯಾಡಲು ಬಂದವರು ಕ್ಷೇತ್ರದ ಸುತ್ತಲೂ ಬಳಸಿಕೊಂಡಿದ್ದರ, ಕೆಲವರಂತೂ ಮರಗಳ ಕೊಂಬೆಗಳನ್ನು ಹತ್ತಿ ಕುಳಿತು ಕೊಂಡಿದ್ದರು. ಅವರ ಕೈಯಲ್ಲಿದ್ದ ಬಂದೂಕಗಳಿಂದ ಹೊರಟ ನೀಲಿಯ ಹೊಗೆ ಕರಿಯುಮರಗಳ ಮೇಲೆ ನೋಡಗಳಂತೆ ತೇಲಿ ಹೋಗುತ್ತಿತ್ತು, ನೆಲದ ಮೇಲೆ ಅಲ್ಲಿಂದಿಲ್ಲಿಗೆ ನಾಯಿಗಳು ಓಡಿಯಾಡುತ್ತಿದ್ದರೆ ಅವುಗಳ ಕಾಲಿಗೆ ಸಿಕ್ಕಿ ಜೊಂಡು ಮುದುರಿಕೊಳ್ಳುತ್ತಿತ್ತು.

ಪಾಪ, ಆ ನಾಯಿಗಳನ್ನು ಕಂಡು ಆ ಮರಿಬಾತು ಎಷ್ಟು ಹೆದರಿ ಕೊಂಡಿತೊ! ಅದು ತನ್ನ ರೆಕ್ಕೆಯ ಅಡಿಯಲ್ಲಿ ತನ್ನ ತಲೆಯನ್ನು ಮರೆಮಾಡಿ ಕೊಳ್ಳಬೇಕೆಂದು ತಿರುಗಿದ ಅದೇಕ್ಷಣದಲ್ಲಿ ಒಂದು ಭಯಂಕರವಾದ ದೊಡ್ಡ ನಾಯಿ ಅದರ ಹತ್ತಿರದಲ್ಲಿಯೇ ಹಾದುಹೋಯಿತು ಅದರ ದಾಡೆಗಳು ತೆರೆದುಕೊಂಡಿದ್ದುವು, ನಾಲಗೆ ಬಾಯಿಂದ ನೇತುಬಿದ್ದಿತ್ತು, ಅದರ ಕಣ್ಣುಗಳು ಭಯಂಕರವಾಗಿ ಸಿಟ್ಟೆಸುತ್ತಿದ್ದುವು ಅದು ಮರಿಬಾತಿನ ಹತ್ತಿರಕ್ಕೆ ತನ್ನ ಮೂಗನ್ನು ಚಾಚಿ, ತನ್ನ ಹರಿತವಾದ ಹಲ್ಲುಗಳನ್ನು ತೋರಿಸಿ, ಅದನ್ನು ಮುಟ್ಟದೆ ಪಳಕ್ಕನೆ ನೀರಿನೊಳಕ್ಕೆ ನೆಗೆದು ಹೊರಟುಹೋಯಿತು. ಮರಿ ಬಾತು "ಓ! ನಾನು ಇಷ್ಟು ಕುರೂಪಿಯಾಗಿರುವುದೂ ಒಂದು ಕ್ಷೇಮವೇ ನಾಯಿ ಕೂಡ ನನ್ನನ್ನು ಮುಟ್ಟುವುದಿಲ್ಲ" ಎಂದು ನಿಟ್ಟುಸಿರುಬಿಟ್ಟಿತು ಹಾಗೆಂದುಕೊಂಡು ಅಗು ಅಲುಗಾಡದೆ ಮಲಗಿದ್ದಾಗ ಜೊಂಡುಗಳ ಸುತ್ತಲೂ ಗುಂಡಿನ ಸದ್ದಾಯಿತು, ಅದರ ತಲೆಯ ಮೇಲೆ ಬಂದೂಕಗಳನ್ನು ಹಾರಿಸು ತ್ತಿದ್ದರು ಬಹಳ ಹೊತ್ತಿನ ಮೇಲೆ ಎಲ್ಲವೂ ನಿಶ್ಶಬ್ದವಾಯಿತ, ಆದರೂ ಮರಿಬಾತಿಗೆ ಅಲ್ಲಿಂದ ಕದಲಲು ಧೈರ್ಯವಾಗಲಿಲ್ಲ ಅನೇಕ ಗಂಟೆಗಳ ಕಾಲ ಅದು ಕಾಯ್ದು ಕುಳಿತಿದ್ದು, ಕಡೆಗೆ ಬಹಳ ಜಾಗರೂಕತೆಯಿಂದ ಸುತ್ತ ಮುತ್ತಲೂ ನೋಡಿ, ಆ ಸ್ಥಳದಿಂದ ಅವಸರವಸರವಾಗಿ ಹೊರಟುಹೋಯಿತು. ಹೊಲಗಳ ಮೇಲೂ ಹುಲ್ಲುಗಾವಲುಗಳ ಮೇಲೂ ಅದು ಓಡಿಹೋಗುತ್ತಿರು ವಾಗ ದೊಡ್ಡ ಬಿರುಗಾಳಿ ಎದ್ದಿತು. ಮರಿಬಾತು ಅದರ ಎದುರಿಗೆ ನಿಲ್ಲಲಾರದೆ

ಹೋಯಿತು ಸಂಜೆಯವೇಳೆಗೆ ಯಾವುದೋ ಮುರುಕು ಗುಡಿಸಿಲಿನ ಹತ್ತಿರ ಬರುವಹೊತ್ತಿಗೆ ಅದಕ್ಕೆ ನಿಂತುಕೊಳ್ಳುವ ತ್ರಾಣ ಕೂಡ ಹೋಗಿಬಿಟ್ಟಿತ್ತು ತಾನು ಯಾವ ಪಕ್ಕಕ್ಕೆ ಮೊದಲು ಬೀಳಬೇಕೆಂಬುದು ತೋಚದೆ ನಿಂತು ಕೊಂಡಿದೆಯೋ ಎಂಬ ಹಾಗಿತ್ತು ಬಿರುಗಾಳಿ ಬರುಬರುತ್ತ ಬಲವಾಯಿತು ಮರಿಬಾತು ಮುಂದೆ ಹೋಗುವ ಹಾಗಿರಲಿಲ್ಲ. ಅದು ಗುಡಿಸಿಲಿನ ಹತ್ತಿರ ದಲ್ಲೇ ಕುಳಿತುಕೊಂಡಿತು ಗುಡಿಸಿಲ ಬಾಗಿಲಿನ ತಿರುಗಣೆ ಮುರಿದುಹೋಗಿ ಬಾಗಿಲು ಮುಚ್ಚಿರಲಿಲ್ಲವೆಂಬುದು ಆಗ ಅದಕ್ಕೆ ಗೋಚರವಾಯಿತು ಆದ ಕಾರಣ, ತಾನು ನುಸುಳಿಹೋಗುವುದಕ್ಕೆ ಸಾಕಾಗುವಷ್ಟು ಅವಕಾಶ ಆ ಬಾಗಿಲ ಕೆಳಗೆ ಇದ್ದುದನ್ನು ಕಂಡು, ಅದು ಸದ್ದುಮಾಡದೆ ಮೆಲ್ಲಗೆ ಒಳಗೆ ನುಸುಳಿ, ಆ ರಾತ್ರಿಗೆ ಆಶ್ರಯ ಪಡೆಯಿತು ಒಬ್ಬ ಹೆಂಗಸು, ಒಂದು ಗಂಡು ಬೆಕ್ಕು, ಒಂದು ಕೋಳಿ ಅಲ್ಲ ವಾಸವಾಗಿದ್ದರು ಗಂಡುಬೆಕ್ಕನ್ನು ಆ ಮನೆಯಾಕೆ 'ನನ್ನ ಮಗು' ಎಂದು ಕರೆದು ಬಹಳ ಮುದ್ದು ಮಾಡುತ್ತಿದ್ದಳು ಅದು ಬೆನ್ನನ್ನು ಬಾಗಿಸಿ ಮೇಲೆತ್ತಿ, ಪುರ್ರೆಂದು ಶಬ್ದಮಾಡುತ್ತಿತ್ತು, ಕೆಲವು ಸಾ ವ್ಯಕೂದಲಿನ ಮೇಲೆ ಕೈಯಾಡಿಸಿದರೆ ಕಿಡಿಗಳನ್ನು ಕಾರುತ್ತಿತ್ತು ಕೋಳಿಯು ಕಾಲುಗಳು ಮೋಟಾಗಿದ್ದ ಕಾರಣ ಅವಳು ಅದನ್ನು 'ಮೋಟುಕಾಲು ಮಾರಿ' ಎಂದು ಕರೆಯುತ್ತಿದ್ದಳು. ಅದು ಒಳ್ಳೆಯ ಮೊಟ್ಟೆಗಳನ್ನು ಇಡುತ್ತಿತ್ತು, ಆದ್ದರಿಂದ ಅವಳು ಅದನ್ನು ತನ್ನ ಸ್ವಂತ ಮಗುವಿನಂತೆ ಪ್ರೀತಿಸುತ್ತಿದ್ದಳು ಬೆಳಗ್ಗೆ ಈ ಆಗಂತುಕವಾದ ಮರಿಬಾತು ಕಣ್ಣಿಗೆ ಬಿದ್ದಾಗ ಗಂಡುಬೆಕ್ಕು ಪುರ್ರೆಂದಿತು, ಕೋಳಿ 'ಕ್ಲಕ್, ಕ್ಲಕ್' ಎಂದಿತು.

"ಏನಿದು ಇಷ್ಟು ಗಲಭೆ!" ಎಂದು ಆ ಮುದುಕಿ ಮನೆಯ ಸುತ್ತಲೂ ನೋಡಿದಳು. ಆದರೆ ಅವಳ ದೃಷ್ಟಿ ಚೆನ್ನಾಗಿರಲಿಲ್ಲ. ಆದ್ದರಿಂದ ಮರಿಬಾತು ಅವಳ ಕಣ್ಣಿಗೆ ಬಿದ್ದಾಗ ಅದು ಯಾರ ಮನೆಯಿಂದಲೋ ತಪ್ಪಿಸಿಕೊಂಡ ಧಡಿ ಬಾತು ಇರಬೇಕು ಎಂದುಕೊಂಡಳು "ಓಹೋ, ಎಂಥ ಅಮೂಲ್ಯವಾದ ಬಾತು. ಇದು ಗಂಡುಬಾತುವಾಗದೆ ಹೆಣ್ಣಾಗಿದ್ದರೆ, ಬಾತುಕೋಳಿಯ ಮೊಟ್ಟೆ ಗಳನ್ನು ನಾನು ತಿನ್ನಬಹುದು. ನೋಡೋಣ, ಸ್ವಲ್ಪ ದಿನ ನೋಡೋಣ" ಎಂದುಕೊಂಡಳು ಹಾಗೆಂದುಕೊಂಡು, ಪರೀಕ್ಷೆಮಾಡೋಣವೆಂದು ಮೂರು ವಾರ ಅದನ್ನು ಅಲ್ಲೇ ಇರಗೊಟ್ಟಳು. ಆದರೆ ಅದು ಮೊಟ್ಟೆಗಳೇ ಇಡಲಿಲ್ಲ.

ಆ ಮನೆಗೆ ಗಂಡುಬೆಕ್ಕೇ ಯಜಮಾನನಾಗಿತ್ತು, ಕೋಳಿ ಯಜಮಾನಿತಿಯಾಗಿತ್ತು. ಅವು ಯಾವಾಗಲೂ "ನಾವೂ ಪ್ರಪಂಚವೂ" ಎಂದು ಹೇಳುತ್ತಿದ್ದುವು. ತಾವಿಬ್ಬರೇ ಅರ್ಧ ಪ್ರಪಂಚ, ಅದರಲ್ಲೂ ಅತ್ಯುತ್ತಮವಾದ ಅರ್ಧ ಎಂದು ಅವು ತಿಳಿದುಕೊಂಡಿದ್ದುವು. ಈ ವಿಷಯದಲ್ಲಿ ಇತರರಿಗೆ ಭಿನ್ನಾಭಿಪ್ರಾಯವಿರಬಹುದೆಂದು ಮರಿಬಾತು ಹೇಳಿದರೂ ಅಂತಹ ಸಂದೇಹಗಳಿಗೆ ಕೋಳಿ ಕಿವಿಕೊಡುತ್ತಿರಲಿಲ್ಲ.

"ನೀನು ಮೊಟ್ಟೆ ಇಡಬಲ್ಲೆಯೊ?" ಎಂದು ಕೋಳಿ ಕೇಳಿತು.

"ಇಲ್ಲ" ಎಂದು ಮರಿಬಾತು ಹೇಳಿತು

"ಹಾಗಾದರೆ ದಯಮಾಡಿ ಬಾಯಿ ಮುಚ್ಚಿಕೊ".

"ನೀನು ಬೆನ್ನು ಬಾಗಿಸಬಲ್ಲೆಯ? ಪುರ್ರೆಂದು ಶಬ್ದಮಾಡಬಲ್ಲೆಯ? ಅಥವಾ ಕೂದಲಿನಿಂದ ಕಿಡಿ ಕೆದರಬಲ್ಲೆಯ?" ಎಂದು ಗಂಡುಬೆಕ್ಕು ಕೇಳಿತು

"ಇಲ್ಲ" ಎಂದು ಮರಿಬಾತು ಹೇಳಿತು

"ಹಾಗಾದರೆ, ಬುದ್ಧಿವಂತರು ಮಾತನಾಡುತ್ತಿರುವಾಗ ಬಾಯಿ ಬಿಡಲು ನಿನಗೆ ಅಧಿಕಾರವಿಲ್ಲ"

ಮರಿಬಾತು ಉತ್ಸಾಹವನ್ನು ಕಳೆದುಕೊಂಡು ಒಂದು ಮೂಲೆಯಲ್ಲಿ ಮುದುರಿಕೊಂಡಿತು. ಆದರೆ ಅಷ್ಟರಲ್ಲೇ ತೆರೆದ ಬಾಗಿಲಿನ ಮೂಲಕವಾಗಿ ಸೂರ್ಯನ ಬೆಳಕೂ ಹೊಸಗಾಳಿಯೂ ಮನೆಯೊಳಗೆ ಬಂದಾಗ ಮಾತ್ರ ನೀರಿನ ಮೇಲೆ ಈಜಾಡಬೇಕೆಂದು ಅದಕ್ಕೆ ಬಹಳ ಆಸೆ ಹುಟ್ಟಿತು. ಮನಸ್ಸು ತಡೆಯಲಾರದೆ ತನ್ನ ಆಸೆಯನ್ನು ಕೋಳಿಗೆ ಹೇಳಿಕೊಂಡಿತು

ಅದಕ್ಕೆ ಕೋಳಿ "ಛೆ! ಎಂಥ ಬೆಪ್ಪು ಭಾವನೆ! ನಿನಗೆ ಮಾಡುವುದಕ್ಕೆ ಬೇರೆ ಏನೂ ಕೆಲಸವಿಲ್ಲದ್ದರಿಂದ ಈ ಹುಚ್ಚುಹುಚ್ಚು ಯೋಚನೆ ನಿನಗೆ ಬರುತ್ತಿದೆ. ಪುರ್ರೆಂದು ಶಬ್ದಮಾಡುವುದನ್ನೋ ಅಥವಾ ಮೊಟ್ಟೆಯಿಡುವುದನ್ನೋ ನೀನು ಕಲಿತಿದ್ದಿದ್ದರೆ ಇಂಥಾ ಯೋಚನೆಗಳೆಲ್ಲ ಓಡಿಹೋಗುತ್ತಿದ್ದುವು" ಎಂದಿತು

"ಆದರೂ ನೀರಿನಲ್ಲಿ ಈಜಾಡುತ್ತಾ ನೀರಿನ ಕೆಳಗೆ ಮುಳುಗಿದಾಗ ತಲೆಯ ಮೇಲೆ ಆ ನೀರು ಸಿಳ್ಳೆಂದು ಮುಚ್ಚಿಕೊಳ್ಳುವುದು ಎಷ್ಟು ಆನಂದ ವಾಗಿರುತ್ತದೆ!" ಎಂದು ಮರಿಬಾತು ಎಂದಿತು.

ಅದಕ್ಕೆ ಕೋಳಿ "ಆನಂದವೆ! ನಿನಗೆ ಎಲ್ಲೋ ಹುಚ್ಚು ಹಿಡಿದಿರ ಬೇಕು! ಈಗ ಈ ಬೆಕ್ಕು ಇದೆಯಲ್ಲ, ಇದರಷ್ಟು ಜಾಣಬೆಕ್ಕನ್ನು ನಾನು ಪ್ರಪಂಚದಲ್ಲೇ ಕಂಡಿಲ್ಲ, ಇದನ್ನು ಕೇಳು. ನೀರಿನಲ್ಲಿ ಈಜುವುದೂ ನೀರಿ ನಲ್ಲಿ ಮುಳುಗುವುದೂ ಆನಂದವೇ ಎಂದು ಇದನ್ನು ಕೇಳು. ನಾನು ನನ್ನ ಅಭಿಪ್ರಾಯವನ್ನು ಹೇಳುವುದಿಲ್ಲ. ನಮ್ಮ ಯಜಮಾನಿ ಇದ್ದಾಳಲ್ಲ, ಅವಳಿ ಗಿಂತ ಜಾಣರಾದವರು ಪ್ರಪಂಚದಲ್ಲಿ ಇಲ್ಲ, ಅವಳನ್ನು ಬೇಕಾದರೆ ಕೇಳು. ನೀರು ಅವಳ ತಲೆಯ ಮೇಲೆ ಮುಚ್ಚಿಕೊಳ್ಳುವುದು ಹಾಗಿರಲಿ, ಈಜುವುದ ಕ್ಕಾದರೂ ಅವಳು ಇಷ್ಟಪಟ್ಟಾಳೋ ಎಂದು ನೀನೇ ಅವಳನ್ನು ಕೇಳು" ಎಂದಿತು

ಮರಿಬಾತು "ನಾನು ಹೇಳಿದ್ದು ನಿಮಗೆ ಅರ್ಥವಾಗಲಿಲ್ಲ" ಎಂದಿತು.

"ಅಬ್ಬಾ! ನಮಗೆ ಅರ್ಥವಾಗುವುದಿಲ್ಲ, ಅಲ್ಲವೆ? ನಿಜವಾಗಿಯೂ ನಿನ್ನನ್ನು ಯಾರು ಅರ್ಥಮಾಡಿಕೊಳ್ಳುವುದು ಸಾಧ್ಯ? ನೀನೇನು ನಮ್ಮ ಬೆಕ್ಕಿಗಿಂತ, ನಮ್ಮ ಮುದುಕಿಗಿಂತ ಬುದ್ಧಿವಂತ ಎಂದು ತಿಳಿದುಕೊಂಡಿದ್ದೀ ಯೇನು? ನಾನು ನನ್ನ ವಿಚಾರವಾಗಿ ಏನೂ ಹೇಳಲು ಇಷ್ಟಪಡುವುದಿಲ್ಲ. ಹಾಗೆಲ್ಲ ಮೆರೆಯಬೇಡ, ಮಗು. ನಿನ್ನ ಅದೃಷ್ಟ ಚೆನ್ನಾಗಿದ್ದುದರಿಂದ ನಿನಗೆ ಇಲ್ಲಿ ಇಷ್ಟು ನೆರಳು ಸಿಕ್ಕಿದೆ. ಬೆಚ್ಚಗಿರುವ ಈ ಮನೆಯಲ್ಲಿ ನಿನ್ನ ಜೊತೆ ಯವರಿಂದ ಸ್ವಲ್ಪವಾದರೂ ಬುದ್ಧಿ ಕಲಿಯಬಾರದೆ? ನೀನು ಬಹಳ ಹರಟು ತ್ತೀಯೆ, ನಿನ್ನ ಸಹವಾಸ ಅಷ್ಟು ಹಿತವಾದುದಲ್ಲ. ನನ್ನ ಮಾತು ಕೇಳು, ನಾನು ನಿನಗೆ ಒಳ್ಳೆಯದಾಗಲೆಂದೇ ಹೇಳುತ್ತಿದ್ದೇನೆ. ನಾನು ಹೇಳುವ ಸತ್ಯ ನಿನಗೆ ಅಪ್ರಿಯವಾಗಿರಬಹುದು, ಆದರೆ ಅದು ನನಗೆ ನಿನ್ನಲ್ಲಿರುವ ಸ್ನೇಹದ ಗುರುತು ಆದ್ದರಿಂದ ನನ್ನ ಮಾತನ್ನು ಕೇಳು! ಮೊಟ್ಟೆಯಿಡುವುದನ್ನೂ ಪುರ್‍ರೆಂದು ಶಬ್ದಮಾಡುವುದನ್ನೂ ನೀನು ಎಷ್ಟು ಬೇಗ ಕಲಿತರೆ ಅಷ್ಟು ವಾಸಿ" ಎಂದು ಕೋಳಿ ಹೇಳಿತು.

"ಸರಿ, ನಾನು ಇಲ್ಲಿಂದ ಪುನಃ ಹೊರಗಿನ ಪ್ರಪಂಚಕ್ಕೇ ಹೋಗಬೇಕು" ಎಂದು ಮರಿಬಾತು ಎಂದಿತು.

"ಹೌದು, ಹಾಗೇ ಮಾಡು" ಎಂದು ಕೋಳಿ ಹೇಳಿತು.

ಮರಿಬಾತು ಆ ಗುಡಿಸಿಲನ್ನು ಬಿಟ್ಟು ಹೊರಟು, ಈಕಡೆಗೆ ಬಂತು. ಆದರೆ ಅದರ ಕುರೂಪವನ್ನು ಕಂಡು ಇತರ ಪ್ರಾಣಿಗಳೆಲ್ಲ ಅದರ ಹತ್ತಿರ ಸೇರದೆ ದೂರ ಹೋದವು. ಶರದೃತು ಬಂತು. ಕಾಡಿನ ಎಲೆಗಳು ಕಿತ್ತಳೆ ಬಣ್ಣವಾದುವು, ಚಿನ್ನದ ಬಣ್ಣವಾದುವು ಚಳಿಗಾಲ ಹತ್ತಿರ ಬಂದ ಹಾಗೆಲ್ಲ ಉದುರುತ್ತಿದ್ದ ಎಲೆಗಳನ್ನು ಗಾಳಿ ಹಿಡಿದುಕೊಂಡು ಆ ಚಳಿಯಲ್ಲಿ ಗಿರಗಿರನೆ ತಿರುಗಿಸಿ ಎಸೆಯುತ್ತಿತ್ತು. ಆಲಿಕಲ್ಲುಗಳಿಂದಲೂ ಮಂಜು ಹಿಮಗಳಿಂದಲೂ ಭಾರವಾದ ಮೋಡಗಳು ಭೂಮಿಯ ಹತ್ತಿರ ಜೋತುಬಿದ್ದಿದ್ದುವು. ಮರಗಳಲ್ಲಿ ಕಾಗೆ ಕೂಗುತ್ತಿತ್ತು. ಆ ಮರಿಬಾತನ್ನು ನೋಡಿದರೆ ಚಳಿಯಿಂದ ನೈನಡುಗುತ್ತಿತ್ತು ಪಾಪ, ಆ ಮರಿಬಾತು ಅದು ಹೇಗೆ ಸಹಿಸಿತೋ!

ಒಂದು ಸಂಜೆ, ಬೆಳಗುವ ಮೋಡಗಳ ಮಧ್ಯೆ ಆಗತಾನೆ ಸೂರ್ಯ ಮುಳುಗುತ್ತಿದ್ದಾಗ, ಸುಂದರವಾದ ಪಕ್ಷಿಗಳ ಒಂದು ದೊಡ್ಡ ಹಿಂಡು ಆ ಮರಿಬಾತು ಇದ್ದ ಕ್ಷೇತ್ರಕ್ಕೆ ಬಂತು. ಮರಿಬಾತು ಆ ತೆರದ ಹಕ್ಕಿಗಳನ್ನು ಹಿಂದೆ ಯಾವಾಗಲೂ ನೋಡಿರಲಿಲ್ಲ ಬಂದ ಆ ಹಕ್ಕಿಗಳು ಹಂಸಗಳು ಅವು ತಮ್ಮ ಲಲಿತವಾದ ಕತ್ತುಗಳನ್ನು ಕೊಂಕಿಸಿಕೊಂಡಿದ್ದುವು, ಅವುಗಳ ಮೃದುವಾದ ತುಪ್ಪುಳು ಬೆಳ್ಳಗೆ ಹೊಳೆಯುತ್ತಿತ್ತು, ಅವು ಮಹಾವೈಭವದಿಂದ ಕೂಡಿದ ತಮ್ಮ ರೆಕ್ಕೆಗಳನ್ನು ಹರಡಿಕೊಂಡು, ಹಂಸಗಳು ಮಾತ್ರ ಕೂಗುವ ಕೂಗನ್ನು ಕೂಗಿಕೊಂಡು, ಅಲ್ಲಿಯ ಚಳಿನಾಡುಗಳನ್ನು ಬಿಟ್ಟು ಉಷ್ಣಪ್ರಾಂತ್ಯಗಳಿಗೆ ಹಾರಿಹೋದುವು ಅವು ಆಕಾಶಮಾರ್ಗದಲ್ಲಿ ಮೇಲು ಮೇಲಕ್ಕೆ ಹಾರಿ ಹೋದಹಾಗೆಲ್ಲಾ ಅವುಗಳನ್ನೇ ಕುರಿತು ನೋಡುತ್ತಿದ್ದ ಮರಿಬಾತಿಗೆ ಏನೋ ವಿಚಿತ್ರವಾದ ಅನುಭವವಾಯಿತು ಅದು ನೀರಿನಲ್ಲಿ ಚಕ್ರದ ಹಾಗೆ ಸುತ್ತು ಹಾಕಿ, ಹಾರಿಹೋದ ಹಂಸಗಳ ಕಡೆಗೆ ತನ್ನ ಕುತ್ತಿಗೆಯನ್ನು ಚಾಚಿ, ವಿಚಿತ್ರವಾಗಿ ಕೂಗಿತು, ತಾನು ಕೂಗಿದ ಹೊಸ ಕೂಗಿಗೆ ತಾನೇ ಹೆದರಿಕೊಂಡಿತು ಆ ಸುಂದರವಾದ ಸುಖವಾದ ಪಕ್ಷಿಗಳನ್ನು ಅದು ಎಂದಾ

ದರೂ ಮರೆಯುವುದಕ್ಕೆ ಸಾಧ್ಯವೆ? ಕಡೆಗೆ ಅವು ಕಣ್ಣಿಗೆ ಕಾಣಿಸದ ಹಾಗೆ ಮರೆಯಾದಾಗ ಮರಿಬಾತು ನೀರಿನೊಳಕ್ಕೆ ತಟಕ್ಕನೆ ಮುಳುಗಿ, ಭಾವಾವೇಶ ದಿಂದ ಪುನಃ ಮೇಲಕ್ಕೆ ಎದ್ದು ಬಂತು. ಆ ಹಕ್ಕಿಗಳ ಹೆಸರು ಅದಕ್ಕೆ ತಿಳಿಯದು, ಅವು ಎಲ್ಲಿಗೆ ಹಾರಿಹೋದವೆಂದು ತಿಳಿಯದು, ಆದರೂ ಪ್ರಪಂಚದ ಬೇರೆ ಯಾವ ಪಕ್ಷಿಯನ್ನು ಕಂಡರೂ ಅನುಭವಿಸದಿದ್ದ ಒಂದು ಹೊಸ ಆಕರ್ಷಣೆ ಯನ್ನು ಮರಿಬಾತು ಅನುಭವಿಸಿತು ಆ ಸುಂದರವಾದ ಪಕ್ಷಿಗಳನ್ನು ಕಂಡು ಅದಕ್ಕೆ ಮಾತ್ಸರ್ಯವುಂಟಾಗಲಿಲ್ಲ, ಆದರೆ ತಾನೂ ಅವುಗಳ ಹಾಗೆಯೇ ಚೆಲು ವಾಗಬೇಕೆಂದು ಇಷ್ಟಪಟ್ಟಿತು. ಪಾಪ, ತಾನು ಕುರೂಪಿಯಾಗಿದ್ದರೂ ಕೂಡ, ಆ ಬಾತುಗಳು ಸ್ವಲ್ಪ ಪ್ರೋತ್ಸಾಹ ಕೊಟ್ಟಿದ್ದಿದ್ದರೆ ಸಂತೋಷವಾಗಿ ಅವುಗಳ ಜೊತೆಯಲ್ಲೇ ಇದ್ದುಬಿಡುತ್ತಿತ್ತು!

ಚಳಿಗಾಲದಲ್ಲಿ ಚಳಿಯು ಕೊರೆತ ಹೆಚ್ಚುಹೆಚ್ಚಾಯಿತು. ನೀರು ಚಳಿ ಯಿಂದ ಹೆಪ್ಪುಗಟ್ಟದ ಹಾಗೆ ತಡೆಯುವುದಕ್ಕೋಸ್ಕರ ಅದು ನೀರಿನಲ್ಲಿ ಎಡೆ ಬಿಡದೆ ಈಜಾಡಬೇಕಾಗಿತ್ತು ಆದರೂ ಬರುಬರುತ್ತ ಪ್ರತಿರಾತ್ರಿಯೂ ನೀರಿನ ಅಗಲ ಕಿರಿದಾಗುತ್ತಿತ್ತು. ಕಟ್ಟಕಡೆಗೆ ನೀರು ಗಟ್ಟಿಯಾಗಿ ಸುತ್ತಲೂ ಹೆಪ್ಪು ಗಟ್ಟಿತು ತನಗೆ ಉಳಿದ ಸ್ವಲ್ಪ ಸ್ಥಳದಲ್ಲಿಯೇ ಅದೂ ಮುಚ್ಚಿಹೋಗಬಾರ ದೆಂದು ಮರಿಬಾತು ಒಂದೇ ಸಮನೆ ಕಾಲು ಆಡಿಸುತ್ತಿತ್ತು. ಕೊನೆಗೆ ಅದಕ್ಕೂ ಆಯಾಸ ಅತಿಯಾಗಿ, ಶಕ್ತಿಕುಂದಿ, ಹಿಮದ ಹಿಡಿತಕ್ಕೆ ಸಿಕ್ಕಿಕೊಂಡು ಸುಮ್ಮನೆ ಬಿದ್ದಿತು.

ಮರುದಿವಸ ಬೆಳಗಾಗುವ ವೇಳೆಗೆ ಆ ಮಾರ್ಗವಾಗಿ ಹಾದುಹೋಗು ತ್ತಿದ್ದ ಒಬ್ಬ ಹಳ್ಳಿಯವನು ಅದನ್ನು ಕಂಡು, ತನ್ನ ಮರದ ಪಾದರಕ್ಷೆಯಿಂದ ಸುತ್ತಿನ ಹಿಮವನ್ನು ಚೂರುಮಾಡಿ, ಆ ಮರಿಬಾತನ್ನು ಮನೆಗೆ ತೆಗೆದು ಕೊಂಡು ಹೋಗಿ ತನ್ನ ಹೆಂಡತಿಗೆ ಕೊಟ್ಟನು ಮನೆಯೊಳಗಿನ ಹಿತವಾದ ಶಾಖದಿಂದ ಆ ಪಾಪದ ಪ್ರಾಣಿ ಚೇತರಿಸಿಕೊಂಡಿತು ಆದರೆ ಮನೆಯಲ್ಲಿದ್ದ ಸಣ್ಣಮಕ್ಕಳು ಅದರೊಡನೆ ಆಡಬೇಕೆಂದು ಇಷ್ಟಪಟ್ಟಾಗ, ಅವರು ತನಗೆ ಏನಾದರೂ ಹಾನಿ ಮಾಡಿಯಾರೆಂದು ಹೆದರಿಕೊಂಡು, ಆ ಮರಿಬಾತು ಗಾಬರಿ ಯಿಂದ ಹಾರಿ, ಹಾಲಿನ ಪಾತ್ರೆಯೊಳಕ್ಕೆ ಬಿದ್ದು, ಹಾಲನ್ನೆಲ್ಲ ಚೆಲ್ಲಿಬಿಟ್ಟಿತು.

ಮನೆಯಾಕೆ ಕೈಚಪ್ಪಾಳೆ ತಟ್ಟಿದಳು, ಅದರಿಂದ ಅದರ ಗಾಬರಿ ಇನ್ನೂ ಹೆಚ್ಚಿತು ಮೊದಲು ಬೆಣ್ಣೆಯ ಪಾತ್ರೆಗೆ ಉರುಳಿ, ಅನಂತರ ಹಿಟ್ಟಿನ ಮಡಕೆಗೆ ಮಗುಚಿಕೊಂಡು, ಹೊರಕ್ಕೆ ಬಂತು. ಪಾಪ, ಏನು ಅದರ ಅವಸ್ಥೆ! ಮನೆಯಾಕೆ 'ಹೋ' ಎಂದು ಕಿರಿಚಿಕೊಂಡು ಸೌಟನ್ನು ಅದರ ಕಡೆಗೆ ಬೀಸಿದಳು. ಮಕ್ಕಳು ನಗುತ್ತಾ ಕೂಗುತ್ತಾ ಕೇಕೆಹಾಕುತ್ತಾ ಅದನ್ನು ಹಿಡಿಯಬೇಕೆಂದು ಒಬ್ಬರ ಮೇಲೊಬ್ಬರು ಉರುಳಿಬಿದ್ದರು. ಆದರೆ ಅದೃಷ್ಟ ವಶದಿಂದ ಮರಿಬಾತು ತಪ್ಪಿಸಿಕೊಂಡಿತು ಬಾಗಿಲು ತೆರೆದಿತ್ತು; ಮರಿಬಾತು ಹಾಗೆ ನುಣಿಚಿಕೊಂಡು ಹೋಗಿ ಹೊರಗಡೆಯ ಪೊದೆಗಳಲ್ಲಿ, ಹೊಸದಾಗಿ ಬಿದ್ದ ಹಿಮದ ಮಧ್ಯೆ ತ್ರಾಣವಿಲ್ಲದೆ ಬಿದ್ದುಕೊಂಡಿತು.

ಆ ಕಷ್ಟಕರವಾದ ಚಳಿಗಾಲದ ಉದ್ದಕ್ಕೂ ಮರಿಬಾತು ಅನುಭವಿಸಿದ ದುಃಖಗಳನ್ನೂ ಕೋಟಲೆಗಳನ್ನೂ ಹೇಳುತ್ತಾ ಹೋದರೆ ತುಂಬ ವ್ಯಸನವಾಗುತ್ತದೆ. ಆದರೆ ಚಳಿಗಾಲ ಕಳೆದ ಮೇಲೆ ಒಂದುದಿನ ಆ ಮರಿಬಾತು ಕ್ಷೇತ್ರವೊಂದರಲ್ಲಿ ಜೊಂಡುಗಳ ನಡುವೆ ಮಲಗಿತ್ತು. ಬೆಳಗುವ ಸೂರ್ಯನ ಹಿತವಾದ ಶಾಖವನ್ನು ಅನುಭವಿಸುತ್ತ, ಹಕ್ಕಿಗಳ ಹಾಡನ್ನು ಕೇಳುತ್ತಾ, ಸುತ್ತಲೂ ಸುಂದರವಾದ ವಸಂತಮಾಸ ಒಂದಿದ್ದುದನ್ನು ಕಂಡಿತು ಆಗ ಆ ಚಿಕ್ಕಹಕ್ಕಿ ತನ್ನ ರೆಕ್ಕೆಗಳನ್ನು ಬಡಿದು ವಾಯುಮಾರ್ಗದಲ್ಲಿ ಮೇಲಕ್ಕೆ ಹಾರಿದಾಗ ತನ್ನ ರೆಕ್ಕೆಗಳಲ್ಲಿ ಬಲ ಕೂಡಿದೆಯೆಂದು ಅನುಭವವಾಯಿತು ಆ ರೆಕ್ಕೆಗಳೇ ತನ್ನನ್ನು ಮುಂದೆ ಎತ್ತಿಕೊಂಡು ಹೋಗುತ್ತಿರುವಾಗ, ತಾನು ಹೇಗೆ ಬಂದೆನೆಂಬುದು ತನಗೇ ತಿಳಿಯದ ಹಾಗೆ ಆ ಹಕ್ಕಿ ಒಂದು ದೊಡ್ಡ ತೋಟದೊಳಕ್ಕೆ ಬಂದಿತ್ತು. ಅಲ್ಲಿ ಸೇಬಿನ ಗಿಡಗಳೆಲ್ಲ ತುಂಬ ಹೂವು ಬಿಟ್ಟಿದ್ದುವು, ಅಲ್ಲಿನ ನಯವಾದ ಹುಲ್ಲುಗಾವಲನ್ನು ಬಳಸಿ ಹರಿಯುತ್ತಿದ್ದ ಕಾಲುವೆಗೆ ತಮ್ಮ ಉದ್ದವಾದ ಹಸಿರು ಕೊಂಬೆಗಳನ್ನು ಇಳಿಯಬಿಟ್ಟು ಸುವಾಸನೆಯ ಮರಗಳು ನಿಂತಿದ್ದುವು. ಸುತ್ತ ಎಲ್ಲವೂ ಸುಂದರವಾಗಿತ್ತು. ಪಕ್ಕದ ಪೊದರಿನಿಂದ ಮೂರು ಸುಂದರವಾದ ಬಿಳಿಯ ಹಂಸಗಳು ತಮ್ಮ ಗರಿಗಳನ್ನು ಮುರುಮುರನೆ ಶಬ್ದಮಾಡುತ್ತ ನಯವಾದ ನೀರಿನ ಮೇಲೆ ಹಗುರವಾಗಿ ತೇಲಿ ಬಂದುವು ಮರಿಬಾತು ತಾನು ಹಿಂದೆ ಕಂಡ ಚೆಲುವಾದ ಹಕ್ಕಿಗಳನ್ನು ಜ್ಞಾಪಿಸಿಕೊಂಡು, ಏನೋ ಒಂದು ವಿಚಿತ್ರವಾದ ಸಂಕಟವನ್ನು ಅನುಭವಿಸಿತು

"ಈ ರಾಜಪಕ್ಷಿಗಳ ಕಡೆಗೆ ಹೋಗೋಣ ಕುರೂಪಿಯಾದ ನಾನು ತಮ್ಮ ಹತ್ತಿರ ಬರುವಷ್ಟು ಧೈರ್ಯ ತೋರಿಸಿದೆನೆಂದು ಅವು ನನ್ನನ್ನು ಕೊಂದು ಬಿಡಲಿ ಏನೂ ನಷ್ಟವಿಲ್ಲ. ಬಾತುಗಳಿಂದ ಕುಕ್ಕಿಸಿಕೊಂಡು, ಕೋಳಿಗಳಿಂದ ಬಡಿಸಿಕೊಂಡು, ಕೋಳಿಗೆ ಕಾಳು ಎಸೆಯುವ ಹುಡುಗಿಯಿಂದ ಒದೆಸಿಕೊಂಡು ಬದುಕಿರುವುದಕ್ಕಿಂತ, ಚಳಿಗಾಲದಲ್ಲಿ ಹಸಿವಿಗೆ ಸಿಕ್ಕಿ ನರಳುವುದಕ್ಕಿಂತ ಈ ಪಕ್ಷಿಗಳು ನನ್ನನ್ನು ಕೊಲ್ಲುವುದೇ ಮೇಲು" ಎಂದುಕೊಂಡು, ಅದು ನೀರಿನಮೇಲೆ ಹಾರಿ ಆ ಸುಂದರವಾದ ಹಂಸಗಳ ಎದುರಿಗೆ ಹೋಯಿತು ಅವು ಆ ಹೊಸ ಹಕ್ಕಿಯನ್ನು ಕಂಡೊಡನೆಯೆ ರೆಕ್ಕೆಗಳನ್ನು ಕೆದರಿಕೊಂಡು ಎದುರಿಗೆ ಬಂದವು.

ಪಾಪ, ಆ ಪ್ರಾಣಿ "ನನ್ನನ್ನು ಕೊಲ್ಲಿ, ಬನ್ನಿ" ಎಂದು ನೀರಿನವರೆಗೂ ತನ್ನ ತಲೆಯನ್ನು ಬಗ್ಗಿಸಿ, ಸಾವನ್ನೇ ಎದುರುನೋಡುತ್ತಿತ್ತು.

ಆದರೆ ಕೆಳಗಿದ್ದ ತಿಳಿಯಾದ ನೀರಿನಲ್ಲಿ ಅದಕ್ಕೆ ಕಾಣಿಸಿದ್ದು ಏನು? ತನ್ನ ಸ್ವಂತ ಬಿಂಬ! ನೋಡಿದರೆ, ತಾನು ನೋಡುವುದಕ್ಕೆ ಅಸಹ್ಯವಾದ ಕರಿಯ ಬೂದಿಬಣ್ಣದ ಹಕ್ಕಿಯಾಗಿರಲಿಲ್ಲ, ಲಲಿತವಾಗಿ ಸುಂದರವಾದ ಹಂಸವಾಗಿತ್ತು. ಹಕ್ಕಿ ತಾನು ಹಂಸದ ಮೊಟ್ಟೆಯಿಂದ ಮರಿಯಾಗಿ ಹುಟ್ಟಿರುವಾಗ ಬಾತಿನ ಗೂಡಿನಲ್ಲಿ ಹುಟ್ಟಿದರೇನು, ಹೊಲಮನೆಯ ಅಂಗಳದಲ್ಲಿ ಹುಟ್ಟಿದರೇನು! ಇದುವರೆಗೆ ಅಷ್ಟು ದುಃಖವನ್ನೂ ಕೋಟಲೆಗಳನ್ನೂ ಅನುಭವಿಸಿದುದಕ್ಕೆ ಈಗ ಸಂತೋಷವಾಯಿತು. ಹಿಂದೆ ಅಷ್ಟು ಅನುಭವಿಸಿದುದೂ ಈಗ ಬಂದ ಸುಖವನ್ನೂ ಸಂತೋಷವನ್ನೂ ಇನ್ನಷ್ಟು ಚೆನ್ನಾಗಿ ಸವಿಯುವುದಕ್ಕೆ ಸಹಾಯವಾಯಿತು. ದೊಡ್ಡ ಹಂಸಗಳು ಆ ಹೊಸಹಕ್ಕಿಯ ಸುತ್ತ ಈಜಿಕೊಂಡು, ಅದಕ್ಕೆ ಸ್ವಾಗತವನ್ನು ನೀಡುವಂತೆ ಅದರ ಕುತ್ತಿಗೆಯನ್ನು ತಮ್ಮ ಕೊಕ್ಕುಗಳಿಂದ ಸವರಿದುವು

ಅಷ್ಟರಲ್ಲಿಯೇ ಕೆಲವು ಸಣ್ಣ ಮಕ್ಕಳು ಆ ತೋಟದೊಳಕ್ಕೆ ಬಂದು ರೊಟ್ಟಿಯ ಚೂರುಗಳನ್ನು ನೀರಿನೊಳಕ್ಕೆ ಎಸೆದರು.

ಅವರಲ್ಲಿ ಒಂದು ಬಹಳ ಚಿಕ್ಕಮಗು "ನೋಡು, ಅಲ್ಲೊಂದು ಹೊಸ ಹಂಸ" ಎಂದಿತು. ಉಳಿದವರು ಸಂತೋಷದಿಂದ ಕೂಗಿಕೊಂಡು, ತಮ್ಮ

ತಾಯಿ ತಂದೆಯ ಹತ್ತಿರ ಹೋಗಿ ಕುಣಿಯುತ್ತಾ ಕೈತಟ್ಟುತ್ತಾ "ಇನ್ನೊಂದು ಹಂಸ ಬಂದಿದೆ. ಹೊಸದೊಂದು ಹಂಸ ಬಂದಿದೆ" ಎಂದು ಕೂಗಿಕೊಂಡರು.

ಆಗ ಅವರು ಬಂದು ನೀರಿಗೆ ಇನ್ನಷ್ಟು ರೊಟ್ಟಿಚೂರು ಎಸೆದು, "ಈ ಹೊಸದು ಉಳಿದವುಗಳಿಗಿಂತ ಸುಂದರವಾಗಿದೆ. ಇಷ್ಟು ಚಿಕ್ಕದಾಗಿದ್ದರೂ ಎಷ್ಟು ಚೆಲುವಾಗಿದೆ!" ಎಂದರು ದೊಡ್ಡ ಹಂಸಗಳು ಅದರ ಎದುರಿಗೆ ತಲೆಬಾಗಿಸಿದುವು.

ಆಗ ಅದಕ್ಕೆ ತುಂಬ ನಾಚಿಕೆಯಾಯಿತು, ತನ್ನ ರೆಕ್ಕೆಯ ಅಡಿಯಲ್ಲಿ ತಲೆಯನ್ನು ಮರೆಸಿಕೊಂಡಿತು ಏನುಮಾಡಬೇಕೋ ಗೊತ್ತಾಗಲಿಲ್ಲ. ತಾನು ಅಷ್ಟು ಸುಖವನ್ನು ಅನುಭವಿಸಿತಾದರೂ ಸ್ವಲ್ಪವೂ ಜಂಬಪಡಲಿಲ್ಲ. ಅದರ ಕುರೂಪವನ್ನು ಕಂಡು ಅಷ್ಟು ಗೋಳುಹುಯಿದುಕೊಂಡಿದ್ದರು, ಅಷ್ಟು ತಿರಸ್ಕಾರದಿಂದ ನೋಡಿದ್ದರು; ಆದರೆ ಈಗ ಎಲ್ಲ ಹಕ್ಕಿಗಳಿಗಿಂತ ತಾನು ಸುಂದರವೆಂದು ಹೇಳುತ್ತಿದ್ದರು ಅದರೆದುರಿಗೆ ದೊಡ್ಡ ವೃಕ್ಷಗಳು ಕೂಡ ತಮ್ಮ ಕೊಂಬೆಗಳನ್ನು ನೀರಿನವರೆಗೂ ಬಾಗಿಸಿದುವು ಸೂರ್ಯನ ಬೆಳಕು ಬೆಚ್ಚಗೆ ಹಿತವಾಗಿತ್ತು. ಆಗ ಅದು ತನ್ನ ಗರಿಗಳನ್ನು ಮುರಮುರನೆ ಶಬ್ದಮಾಡಿ, ತನ್ನ ಬಳುಕುವ ಕೊರಳನ್ನು ಕೊಂಕಿಸಿ, "ನಾನು ಕುರೂಪಿಯಾದ ಬಾತುಮರಿಯಾಗಿದ್ದಾಗ ಇಂತಹ ಸುಖವನ್ನು ಕನಸಿನಲ್ಲಿಯೂ ಕಂಡಿರಲಿಲ್ಲ" ಎಂದು ಹೃದಯದ ಆಳದಿಂದ ಸಂತೋಷವಾಗಿ ಕೂಗಿತು.

---

ಬಿ. ಶ್ರೀನಿವಾಸ ಐಯ್ಯಂಗಾರ್, ಮುದ್ರಕರು ಮತ್ತು ಪ್ರಕಾಶಕರು,
ಅರಳೇಪೇಟೆ, ಬೆಂಗಳೂರು ಇವರಲ್ಲಿ ಇದು ಮುದ್ರಿತವಾಯಿತು.

# ಜಿ. ಪಿ. ರಾಜರತ್ನಂ ಅವರ ಧರ್ಮಸಾಹಿತ್ಯ

## ಬೌದ್ಧ ಗ್ರಂಥಗಳು

ಚೀನಾದೇಶದ ಬೌದ್ಧ ಯಾತ್ರಿಕರು
ಧರ್ಮದಾನಿ ಬುದ್ಧ
ಬುದ್ಧವಚನ ಪರಿಚಯ
ಮಿಲಿಂದ ಪ್ರಶ್ನೆ
ಪಾಲಿ ಪಜ್ಜ ಪುಪ್ಫಂಜಲಿ
ಬುದ್ಧನ ಕತೆಗಳು
ವೈಶಾಖ ಶುಕ್ಲ ಪೂರ್ಣಿಮಾ
ಜಾತಕ ಕತೆಗಳು
ಮೂರು ಪಾಲಿ ಸೂತ್ರಗಳು
ಧರ್ಮಪದ

## ಜೈನ ಗ್ರಂಥಗಳು

ಮಹಾವೀರನ ಮಾತುಕತೆ
ಶ್ರೀ ಗೋಮಟೇಶ್ವರ
ಶ್ರೀ ಪಾರ್ಶ್ವನಾಥ ಚಂಪು
ಭಗವಾನ್ ಮಹಾವೀರ

## ಇತರ ಪುಸ್ತಕಗಳು

ಚೀನಾದೇಶದ ಗಾಂಧಿ
ಗಾಂಧೀಶಕ್ತಿಯ ಮೂಲ
ಶಾಕ್ಯಮಂಟಪದ ಪ್ರಕರಣ
ಧರ್ಮ - ಸಾಹಿತ್ಯ - ದೃಷ್ಟಿ
ಬುದ್ಧನ ಕಾಲದ ತೀರ್ಥಕರೂ ತೀರ್ಥಕರರೂ

---

**ಸತ್ಯಶೋಧನ ಪುಸ್ತಕ ಭಂಡಾರ**
**ಕೋಟೆ, ಬೆಂಗಳೂರು**

# ಮಕ್ಕಳಿಗೆ ಸಚಿತ್ರವಾದ ಕತೆಗಳು

( ಜಿ. ಪಿ. ರಾಜರತ್ನಂ ಬರೆದುದು )

## ಈಗತಾನೆ ಅಚ್ಚಾಗಿರುವ

೧. ಪಂಡಿತನ ನೆರಳು

೨. ತೆನಾಲಿ ರಾಮ

೩. ಮಕ್ಕಳ ಮುಂಛೌಸನ್

೪. ಪುಟಾಣಿ ಪಂಚತಂತ್ರ

## ಸದ್ಯದಲ್ಲಿಯೇ ಅಚ್ಚಾಗಿ ಬರುವ

೫. ವಾಸವದತ್ತಾ

೬. ವಸಂತಸೇನಾ

೭. ಜೀಮೂತವಾಹನ

೮. ಚಂದನದಾಸ

೯. ಭಾಸನ ಭಾರತ

೧೦. ಆಲಿವರ್ ಟ್ವಿಸ್ಟ್

೧೧ ರಾಬಿನ್ ಹುಡ್

೧೨. ವಿಲಿಯಂ ಟೆಲ್

ಇದುವರೆಗೆ ಅಚ್ಚಾಗಿರುವ ಮಕ್ಕಳ ಪುಸ್ತಕಗಳ
ಪಟ್ಟಿ ಬೇಕಾದರೆ ಒಳಗಿದೆ.